KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೨, ೨೦೦೬ (ಆಶ್ವಯುಜ ೨೦, ಶಕ ವರ್ಷ ೧೯೨೮) | ಸಂಚಿಕೆ ೪೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ವಸತಿ ಸಚಿವಾಲಯ**

**ವಿಷಯ:** ರಾಯಚೂರು ಜಿಲ್ಲೆ, ದೇವದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ರಾಯಚೂರು ಜಿಲ್ಲೆ, ದೇವದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 112 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀಮತಿ ಮಹಾದೇವಿ, ಕೋಂ. ನಿಂಗಪ್ಪ ಸಂದೂರಕರ್, ಸಾ: ದೇವದುರ್ಗ, ರಾಯಚೂರು ಜಿಲ್ಲೆ. | ಪ.ಜಾತಿ ಮಹಿಳೆ |
| 2. | ಶ್ರೀ ಜಹಿರುದ್ದೀನ್ ಗೌರಂಪೇಟ್, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ. | ಅಲ್ಪಸಂಖ್ಯಾತ |
| 3. | ಶ್ರೀ ಬಸವರಾಜಪ್ಪ ಆಲ್ಸಿ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ. | ಸಾಮಾನ್ಯ |
| 4. | ಶ್ರೀ ಚಂದ್ರಶೇಖರ ಬಿನ್ ಕೊಂಡಯ್ಯ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ. | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

ಪಿ.ಆರ್. 1294

**ವಿಷಯ:** ಬಾಗಲಕೋಟೆ ಜಿಲ್ಲೆ ಕೆರೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ ಕೆರೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 114 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ ಕೆರೂರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ವೀರಣ್ಣ ಜವಳಿ<br>ಹೊಸಪೇಟೆ ಓಣಿ, ಕೆರೂರ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | ಸದಸ್ಯರು |
| 2. | ಶ್ರೀಮತಿ ಮಹಾದೇವಿ ಶೋಪೇಶಿ ಬದಾಮಿ, ಸುಣಗಾರ ಓಣಿ<br>ಕೆರೂರ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 3. | ಶ್ರೀ ಐ.ಬಿ. ಚೌದ್ರಿ, ಬಗವಾನ್ ಓಣಿ,<br>ಕೆರೂರ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಸದಸ್ಯರು |
| 4. | ಶ್ರೀ ರಾಜಪ್ಪ ಇಷ್ಟಲಿಂಗಪ್ಪ ಶೆಟ್ಟರ, ಹಳೆಪೇಟೆ,<br>ಕೆರೂರ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1295 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ತುಮಕೂರು ಜಿಲ್ಲೆ, ಕೊರಟಗೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ತುಮಕೂರು ಜಿಲ್ಲೆ, ಕೊರಟಗೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 126 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ತುಮಕೂರು ಜಿಲ್ಲೆ, ಕೊರಟಗೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಸಾಲೇಹ, ಅಹಮದ್ ಬಿನ್ ಮುಜೀದ್ ಸಾಬ್<br>ದೇವಾಂಗಬೀದಿ, ಕೊರಟಗೆರೆ, ತುಮಕೂರು ಜಿಲ್ಲೆ | ಸದಸ್ಯರು |
| 2. | ಶ್ರೀ ಎ. ಶಿವಶಂಕರ್ ಬಿನ್ ಆಂಜಿನಪ್ಪ,<br>ಹರಿಜನ ಕಾಲೋನಿ, ಕೊರಟಗೆರೆ, ತುಮಕೂರು ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಪುಷ್ಪಲತಾ ಬಿನ್ ನಾರಾಯಣರಾಜು,<br>ರಾಜೇಂದ್ರ ಬ್ಯಾಂಗಲ್ ಸ್ಟೋರ್ಸ್, ಕೊರಟಗೆರೆ, ತುಮಕೂರು ಜಿಲ್ಲೆ. | ಸದಸ್ಯರು |
| 4. | ಶ್ರೀ ಎಸ್.ಪಿ. ಲಕ್ಷ್ಮೀನಾರಾಯಣರಾವ್,<br>ಶಾಂತಲ ಸ್ಟುಡಿಯೋ ಮೈನ್‌ರೋಡ್, ಕೊರಟಗೆರೆ, ತುಮಕೂರು ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1297 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 35 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಹೆಚ್.ಎಂ. ಸುಬ್ಬರಾಜು ಬಿನ್ ಹೆಚ್.ಎಸ್. ಮುನಿಯಪ್ಪ<br>ಟೀಚರ್ಸ್ ಕಾಲೋನಿ, ವಿ.ವಿ. ಬಡಾವಣೆ, ಹೊಸಕೋಟೆ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |
| 2. | ಶ್ರೀ ಅಮ್ಜತ್ ಪಾಷಾ ಬಿನ್ ಚೋಟು ಸಾಬ್<br>ಎ.ಆರ್. ಬಡಾವಣೆ, ಹೊಸಕೋಟೆ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |

| | | |
|---|---|---|
| 3. | ಶ್ರೀಮತಿ ವಿ. ಲಕ್ಷ್ಮೀ ಕೋಂ ಉದಯಕುಮಾರ್,<br>ರಾಮಮಂದಿರ ರಸ್ತೆ, ಹೊಸಕೋಟೆ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |
| 4. | ಶ್ರೀ ವೀರೇಂದ್ರ ಸಿಂಗ್ ಬಿನ್ ಅನಂತರಾಮ್ ಸಿಂಗ್,<br>ರಜಪೂತ್ ಬಡಾವಣೆ, ಹೊಸಕೋಟೆ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1281 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಬೀದರ್ ಜಿಲ್ಲೆ ಭಾಲ್ಕಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬೀದರ್ ಜಿಲ್ಲೆ ಭಾಲ್ಕಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 91 ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ಬೀದರ್ ಜಿಲ್ಲೆ ಭಾಲ್ಕಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಸೋಮನಾಥ ಗುರುನಾಥಪ್ಪ ಅಷ್ಟೂರೆ<br>ಸಾಕೀನ: ಶರಾಫ ಬಜಾರ, ಭಾಲ್ಕಿ, ಬೀದರ್ ಜಿಲ್ಲೆ. | ಸದಸ್ಯರು |
| 2. | ಶ್ರೀ ವೆಂಕಟ ಕೀಷನ್‌ರಾವ್ ಇಂಚೂರೆ<br>ಸಾಕೀನ ಹಳೇ ಪಟ್ಟಣ, ಭಾಲ್ಕಿ, ಬೀದರ್ ಜಿಲ್ಲೆ. | ಸದಸ್ಯರು |
| 3. | ಶ್ರೀ ಓಂಕಾರ ವಿಠ್ಠಲ್‌ರಾವ್ ಮೋರೆ,<br>ಸಾಕೀನ: ಅಶೋಕ ನಗರ, ಭಾಲ್ಕಿ, ಬೀದರ್ ಜಿಲ್ಲೆ. | ಸದಸ್ಯರು |
| 4. | ಶ್ರೀಮತಿ ಸುಕನ್ಯಾ ರಾಜಶೇಖರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1282 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ದಾವಣಗೆರೆ ಜಿಲ್ಲೆ, ಹೊನ್ನಾಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ದಾವಣಗೆರೆ ಜಿಲ್ಲೆ, ಹೊನ್ನಾಳಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 55 ಹೆಚ್ಎಎಸ್ 2006, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ದಾವಣಗೆರೆ ಜಿಲ್ಲೆ, ಹೊನ್ನಾಳಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಬಾವಿ ಮನೆ ರಾಜಪ್ಪ ಬಿನ್ ಸಂಕಪ್ಪ<br>ಕಲ್ಕೆರೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ. | ಸದಸ್ಯರು |
| 2. | ಶ್ರೀ ಮೈಲಪ್ಪ ಬಿನ್ ಮಾತಂಗಪ್ಪ,<br>ತುಂಗಭದ್ರಾ ಬಡಾವಣೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ. | ಸದಸ್ಯರು |
| 3. | ಶ್ರೀಮತಿ ಸುಮಿತ್ರಮ್ಮ ಕೋಂ ಮಾಯಪ್ಪ,<br>ದುರ್ಗಿಗುಡಿ, ಹೊನ್ನಾಳಿ, ದಾವಣಗೆರೆ ಜಿಲ್ಲೆ. | ಸದಸ್ಯರು |
| 4. | ಶ್ರೀ ಎಸ್. ಜಬೀವುಲ್ಲಾ ಖಾನ್ ಬಿನ್ ಎಸ್.ಎ. ರಹೇಮಾನ್ ಖಾನ್ (ಅಪ್ರದಿ)<br>ಟಿ.ಎಂ.ಕೆ. ರಸ್ತೆ, ಹೊನ್ನಾಳಿ, ದಾವಣಗೆರೆ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1283 ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆಯ ವಾಡಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್‌ಎಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗುಲ್ಬರ್ಗಾ ಜಿಲ್ಲೆ, ವಾಡಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 73 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2006**

ಮೇಲ್ಕಂಡ ಸಂದರ್ಭದಲ್ಲಿ ಗುಲ್ಬರ್ಗಾ ಜಿಲ್ಲೆ, ವಾಡಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಸಿದ್ದಣ್ಣ ತಂದೆ ಶರಣಪ್ಪ ಕಲಶೆಟ್ಟಿ,<br>ವಾಡಿ, ಗುಲ್ಬರ್ಗಾ. | ಸದಸ್ಯರು |
| 2. | ಶ್ರೀಮತಿ ಸುನೀತಾ ಗಂಡ ಮೋತಿರಾಮ ರಾಠೋಡ,<br>ವಾಡಿ, ಗುಲ್ಬರ್ಗಾ. | ಸದಸ್ಯರು |
| 3. | ಶ್ರೀ ಮಹ್ಮದ ಮಶಾಖ ಹಮೀದ್,<br>ವಾಡಿ, ಗುಲ್ಬರ್ಗಾ. | ಸದಸ್ಯರು |
| 4. | ಶ್ರೀ ರಾಮಚಂದ್ರ ರೆಡ್ಡಿ,<br>ವಾಡಿ, ಗುಲ್ಬರ್ಗಾ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಇಂದುಮತಿ**

ಪಿ.ಆರ್. 1284 ಪೀಠಾಧಿಕಾರಿ-2, ವಸತಿ ಇಲಾಖೆ.

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಕ್ರಮಾಂಕ: ಇಡಿ 94 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2006**

ದಿನಾಂಕ: 22.05.2006ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 29 ಯುಆರ್‌ಸಿ 2006ರ ವಿಷಯ ಮತ್ತು ಆದೇಶದ ಭಾಗದಲ್ಲಿ ಬೆಂಗಳೂರಿನ ದಿ ಹೋಲಿ ಫ್ಯಾಮಿಲಿ ಎಜುಕೇಷನ್ ಟ್ರಸ್ಟ್‌ನ ಬೆಂಗಳೂರಿನಲ್ಲಿನ ಸೈಂಟ್ ಜೋಸೆಫ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು, ಈ ಕಾಲೇಜಿಗೆ "2006-07" ಎಂಬುದನ್ನು "2005-06" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಪಿ.ಆರ್. 1320 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಓತಿಶರಣಪ್ಪ, ಪ್ರಧಾನ ವ್ಯವಸ್ಥಾಪಕರು–2, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರಿಗೆ ನಿಯೋಜನೆ ಷರತ್ತು ಮತ್ತು ಸೇವಾ ನಿಬಂಧನೆಗಳನ್ನು ಹೊರಡಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂಖ್ಯೆ:ಮಮಇ 323 ಎಸ್‌ಜೆಡಿ 2004 ದಿ:11–11–2005

**ಸರ್ಕಾರಿ ಆದೇಶ ಸಂಖ್ಯೆ. ಮಮಇ 280 ಎಸ್‌ಜೆಡಿ 2006 ಬೆಂಗಳೂರು ದಿನಾಂಕ: 23ನೇ ಆಗಸ್ಟ್ 2006**

ಶ್ರೀ ಓತಿಶರಣಪ್ಪ, ಪ್ರಧಾನ ವ್ಯವಸ್ಥಾಪಕರು–2, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರನ್ನು ನಿಯೋಜಿಸಲು ನಿಬಂಧನೆ ಷರತ್ತು ಮತ್ತು ಸೇವಾ ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

**1) ನಿಯೋಜನೆಯ ಅವಧಿ**

ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ: 6–5–2006 ರಿಂದ 31–8–2006 ವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**2) ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

**3) ವೇತನ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಇವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200ರೂ.ಗಳ ಗರಿಷ್ಠ ಮಿತಿಗೊಳಪಟ್ಟು, ಆ ವೇತನ ಶ್ರೇಣಿಯ ಸರಾಸರಿಯ ಶೇ.5ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

**4) ತುಟ್ಟಿ ಭತ್ಯೆ:**

ಮನೆ ಬಾಡಿಗೆ ಭತ್ಯೆ: ನಗರ ಪರಿಹಾರ ಭತ್ಯೆ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

**5) ಸೇರುವ ಕಾಲ:** ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ ಇವುಗಳನ್ನು ನಿಯೋಜನೆ ಮೇಲೆ

ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

**6) ಪ್ರಯಾಣ ಭತ್ಯೆ:**

ನಿಯೋಜನೆ ಮೇಲೆ ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

**7) ರಜೆ ನಿಯಮಗಳು:**

ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜಾ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**8) ರಜೆ ಪ್ರಯಾಣ ರಿಯಾಯಿತಿ:**

ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

**9) ಗಳಿಕೆ ರಜೆ ನಗದೀಕರಣ:**

ಕರ್ನಾಟಕ ನಾಗರೀಕರ ಸೇವಾ ನಿಯಮಗಳ 'ಸಿ' ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

**10) ವೈದ್ಯಕೀಯ ರಿಯಾಯಿತಿಗಳು:–**

1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ)ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

**11) ದುರ್ಬಲತೆ ರಜೆ:–**

ನಿಯೋಜಕರ ಬಳಿ ಸೇವೆಯಲ್ಲಿರುವಾಗ ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯನಿಯೋಜಕರು ಬದ್ಧರಾಗಿರುತ್ತಾರೆ.

**12) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:–**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| (1) ರಜೆ ವೇತನ ಅಂಶದಾನ: | ಅನ್ಯಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ, ಪಡೆಯುವ ಸಂಬಳದ ಶೇ 11 ರಷ್ಟು. |
| (2) ನಿವೃತ್ತಿ ವೇತನ ಅಂಶದಾನ: | ಕಾಲ ಕಾಲಕ್ಕೆ ಪಡೆಯುವ ವೇತನದ 8ನೇ ಒಂದು ಭಾಗ ಉದ್ದೇಶಕ್ಕೆ ವೇತನ– ಎಂದರೆ ಸರ್ಕಾರಿ ಆದೇಶ ಸಂ.ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ:11–2–88ರಲ್ಲಿ ವಿವರಿಸಲಾದ ವೇತನ ಎಂದರ್ಥ. |

ಅ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯಸೇವೆಯು ಮುಗಿದು ಹೋದಂದಿನಿಂದ ರಜೆಯ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | |
|---|---|
| ಆ) ರಜೆ ವೇತನ 1) ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು–60–ಇತರೆ ಸೇವೆಗಳು 800– ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ |
| 2) ಇತರ ಪ್ರಕರಣದಲ್ಲಿ | |
| (ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ |
| (ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ | ಸಂಬಂಧದ ಶೀರ್ಷಿಕೆ 800 ಇತರೆ ಜಮೆಗಳು–ರಜೆ ವೇತನದ ಅಂಶದಾನ |
| 1) ಸಾಮಾನ್ಯ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು–ರಜೆ ವೇತನ ಅಂಶದಾನ |
| 2) ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0250 ಇತರೆ ಸಾಮಾಜಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 3) ಆರ್ಥಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನದ ಅಂಶದಾನ. |

(ಸಿ) ನಿವೃತ್ತಿ ವೇತನ ಅಂಶದಾನ : 0071 ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳ ಅಂಶದಾನ ಮತ್ತು ವಸೂಲಿಗಳು 101.ಚಂದಾಗಳು ಮತ್ತು ಅಂಶದಾನಗಳು– 03.ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ.

(ಡಿ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(ಈ) ರಜೆ ವೇತನ ಮತ್ತು ನಿವೃತ್ತಿ ವೇತನ ವಂತಿಕೆಗಳನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು– ಇವರಿಂದ ಮಹಾಲೇಖಪಾಲರು(ಎ ಅಂಡ್ ಇ) ಕರ್ನಾಟಕ, ಬೆಂಗಳೂರು. ಇವರಿಗೆ ತಪ್ಪದೇ ಕ್ರಾಸ್ ಮಾಡಿದ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿ ಮಾಡತಕ್ಕದ್ದು, ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದಲ್ಲ. ಅಂತಹ ನಗದು ರೂಪದಲ್ಲಿ ಸಂದಾಯ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾದ ದಿನಾಂಕವನ್ನು ವಂತಿಕೆಯ ಹೊಣೆಯಿಂದ ವಿಮುಕ್ತಿ ಪಡೆದ ದಿನಾಂಕವೆಂದು ಪರಿಗಣಿಸತಕ್ಕದಾದ್ದರಿಂದ, ಚೆಕ್ :ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿಗದಿಪಡಿಸಿದ ದಿನಾಂಕದೊಳಗಾಗಿ ಮಹಾಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಇವರಿಗೆ ತಲುಪುವಂತೆ ಕಳುಹಿಸತಕ್ಕದ್ದು.

(ಎಫ್) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳ ವಂತಿಕೆ ಮತ್ತು ಅವುಗಳ ಮೇಲೆ ಬಡ್ಡಿಯಿದ್ದರೆ, ಅಂತಹ ಬಡ್ಡಿಗಳನ್ನು ಅತ್ಯಂತ ದತ್ತಿದರ ರೂಪಾಯಿಗೆ ಸರಿಹೊಂದಿಸತಕ್ಕದ್ದು.

**(13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:–** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಕೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ–ಎ ದಲ್ಲಿನ ಅನುಸೂಚಿಯೊಂದಿಗೆ ಇಲಾಖಾ ಮುಖ್ಯಸ್ಥರ ಹೆಸರಿಗೆ ಕ್ರಾಸ್ ಮಾಡಿದ ಚೆಕ್; ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕಳುಹಿಸತಕ್ಕದ್ದು.

**14) ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:–** ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ ಅನ್ಯಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ ನಿಯಮಾವಳಿ: ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ : ಜಿ.ಪಿ.ಎಫ್. ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

ಸಾಮಾನ್ಯ ಭವಿಷ್ಯ ನಿಧಿ : 8005.ರಾಜ್ಯ ಭವಿಷ್ಯ ನಿಧಿ

ಕರ್ನಾಟಕ ಸರ್ಕಾರಿ ವಿಮಾ ಇಲಾಖೆ : 8011 ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು.

**15) ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:–**

ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದುನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965 ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**16) ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:–**

ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯವನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

**17) ಗೃಹ ನಿರ್ಮಾಣ ಮುಂಗಡ: ಗೃಹ ಖರೀದಿ ಮುಂಗಡ :ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:–**

ನಿಯೋಜಕರು, ಪ್ರಸ್ತುತ, ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

18) ದಿನಾಂಕ:10–7–96 ಸಂಖ್ಯೆ–ಎಫ್ ಡಿ 1 ಟಿಎಫ್‌ಪಿ 96 ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1296

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್(ಈಗ ನಿವೃತ್ತರು)ಸೋಮವಾರಪೇಟೆ ತಾಲ್ಲೂಕು ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕ,ತಾಲ್ಲೂಕು ಕಛೇರಿ, ಸೋಮವಾರಪೇಟೆ,ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಬಗ್ಗೆ- ಶ್ರೀ ಈರಯ್ಯ, ನಿವೃತ್ತ ತಹಶೀಲ್ದಾರ್, ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ.ಆರ್‌ಡಿ 66 ಎಡಿಇ 99,ದಿನಾಂಕ:11.7.2000
2) ವಿಚಾರಣಾಧಿಕಾರಿಯವರ ದಿನಾಂಕ:12-02-2002 ರ ವಿಚಾರಣಾ ವರದಿ
3) ದಿನಾಂಕ:14-03-2005ರ ಎರಡನೇ ಕಾರಣ ಕೇಳುವ ನೋಟೀಸ್ ಸಂ. ಕಂಇ 66 ಎಡಿಇ 99.
4) ಶ್ರೀ ಈರಯ್ಯ, ನಿವೃತ್ತ ತಹಶೀಲ್ದಾರ್, ಇವರ ದಿನಾಂಕ:19-05-2005ರ ಲಿಖಿತ ಹೇಳಿಕೆ.
5) ದಿನಾಂಕ:05-05-2006ರ ಕೊಡಗು ಜಿಲ್ಲಾಧಿಕಾರಿಗಳ ಪತ್ರ ಸಂ. ಸಿಬ್ಬಂದಿ(2)/ಸಿಆರ್/34/98-99.
6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ.ಪಿಎಸ್‌ಸಿ 116 ಸಿಎನ್‌ಎಸ್ 05, ದಿನಾಂಕ: 01-07-2006.

**ಪ್ರಸ್ತಾವನೆ:-**

ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು) ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು,ಇವರುಗಳು ಸೋಮವಾರಪೇಟೆ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 1995-96 ಮತ್ತು 1999ನೇ ಸಾಲಿನಲ್ಲಿ ಸುಮಾರು 63 ಪ್ರಕರಣಗಳಲ್ಲಿ ಕ್ರಮಬದ್ಧವಾಗಿ ಕಡತಗಳನ್ನು ತಯಾರಿಸದೆ ದಾಖಲೆಗಳನ್ನು ಆಧಾರವಾಗಿ ತೆಗೆದುಕೊಳ್ಳದೇ ಸಿಆರ್‌ಸಿ ರಿಜಿಸ್ಟರ್‌ನಲ್ಲಿ ದಾಖಲು ಮಾಡಿಕೊಳ್ಳದೆ ಮುದ್ರಾಂಕ ಶುಲ್ಕ ಸಿಆರ್‌ಸಿ ಶುಲ್ಕ ಹಾಗೂ ಇಂಥಳ ಕಂದಾಯ ವಸೂಲಿ ಮಾಡದೆ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುವುದಲ್ಲದೆ ಶಸ್ತ್ರಾಸ್ತ್ರ ಕಾಯ್ದೆ 1959 ರ ನಿಯಮಗಳನ್ನು ಪಾಲಿಸದೆ ಕೋವಿ ಲೈಸೆನ್ಸಗಳನ್ನು ನಿಯಮಬಾಹಿರವಾಗಿ ಮಂಜೂರು ಮಾಡಿರುವುದು ಇಂತಹ ಗುರುತರವಾದ ಆರೋಪಗಳ ಮೇಲೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರ.ಸಂ.(1) ರಲ್ಲಿ ಓದಲಾದ ದಿನಾಂಕ:11-07-2000ದ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ, ಮೇಲೆ ಕ್ರ.ಸಂ.(2) ರಲ್ಲಿ ಓದಲಾದ ದಿನಾಂಕ:12.02.2002 ರ ತಮ್ಮ ವಿಚಾರಣಾ ವರದಿಯಲ್ಲಿ ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದು ಸಮರ್ಪಕವಾಗಿ ಕಂಡು ಬಂದ ಕಾರಣ, ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ:14-03-2005 ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಸದರಿ ಆಪಾದಿತ ಅಧಿಕಾರಿಯಾದ ಶ್ರೀ ಈರಯ್ಯ, ನಿವೃತ್ತ ತಹಶೀಲ್ದಾರ್, ಇವರಿಗೆ ಜಾರಿಗೊಳಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಮೇಲೆ ಕ್ರ.ಸಂ.(4) ರಲ್ಲಿ ಓದಲಾದ ಲಿಖಿತ ಹೇಳಿಕೆಯಲ್ಲಿ ಶ್ರೀ ಈರಯ್ಯ, ನಿವೃತ್ತ ತಹಶೀಲ್ದಾರ್, ಇವರು ತಮ್ಮ ವಿರುದ್ಧ ಮಾಡಿರುವ ಆರೋಪಗಳಿಗೆ ತಾವು ಜವಾಬ್ದಾರರಾಗಿರುವುದಿಲ್ಲ. ಆದ್ದರಿಂದ ತಮ್ಮ ವಿರುದ್ಧ ಮಾಡಿರುವ ಆರೋಪಗಳಿಂದ ತಮ್ಮನ್ನು ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಮೇಲೆ ಕ್ರ.ಸಂ.(5) ರಲ್ಲಿ ಓದಲಾದ ದಿನಾಂಕ:05-05-2006ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್, ಸೋಮವಾರಪೇಟೆ (ಈಗ ನಿವೃತ್ತರು) ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು, ಇವರುಗಳಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾದ ಬಗ್ಗೆ ಮಾಹಿತಿ ಸಲ್ಲಿಸಿ ಒಟ್ಟು ರೂ.28,659.21ಗಳು ಸರ್ಕಾರಕ್ಕೆ ನಷ್ಟ ಉಂಟಾಗಿದೆಯೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (6) ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿ/ನೌಕರರಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಗೆ ಸಹಮತಿಸಿದ್ದು, ಆಪಾದಿತರುಗಳಿಂದ ಸರ್ಕಾರಕ್ಕೆ ಆದ ನಷ್ಟ ರೂ.28,659.21 (ರೂಪಾಯಿಗಳು ಇಪ್ಪತ್ತೆಂಟು ಸಾವಿರದ ಆರುನೂರ ಐವತ್ತೊಂಬತ್ತು ಮತ್ತು ಪೈಸೆ ಇಪ್ಪತ್ತೊಂದು ಮಾತ್ರ) ಅನ್ನು ಶೇ.8 ರ ಬಡ್ಡಿಯೊಂದಿಗೆ ವಸೂಲಿ ಮಾಡುವಂತೆ ತನ್ನ ಅಭಿಪ್ರಾಯ ನೀಡಿರುತ್ತದೆ.

ಈ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿನ ವಿಚಾರಣಾ ವರದಿಯ ಆಧಾರದ ಮೇಲೆ ಹಾಗೂ ಅವರ ವಿರುದ್ಧದ ಗುರುತರ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು), ಇವರು ಕರ್ತವ್ಯ ಚ್ಯುತಿ ಎಸಗಿರುವುದು ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವುದು ಸಾಬೀತಾಗಿರುವುದರಿಂದ ಸರ್ಕಾರವು ಸೂಕ್ತ ದಂಡನೆಯನ್ನು ವಿಧಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 66 ಎಡಿಇ 99, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು), ಸೋಮವಾರಪೇಟೆ ತಾಲ್ಲೂಕು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 (1) (a) ರನ್ವಯ ಇವರ ಪಿಂಚಣಿಯಲ್ಲಿ ಶೇ.50 ರಷ್ಟನ್ನು ಶಾಶ್ವತವಾಗಿ ರದ್ದುಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ. ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 215-A ರನ್ವಯ ಸರ್ಕಾರಕ್ಕೆ ಸಂಭವಿಸಿದ ಆರ್ಥಿಕ ನಷ್ಟ ರೂ.28,659.21 ರ ಪೈಕಿ ರೂ. 14,329-60 (ರೂಪಾಯಿಗಳು ಹದಿನಾಲ್ಕು ಸಾವಿರದ ಮುನ್ನೂರ ಇಪ್ಪತ್ತೊಂಬತ್ತು ಮತ್ತು ಅರವತ್ತು ಪೈಸೆ ಮಾತ್ರ) ಅನ್ನು ಆರ್ಥಿಕ ನಷ್ಟ ಸಂಭವಿಸಿದ ದಿನಾಂಕದಿಂದ ಶೇ.8 ರ ಬಡ್ಡಿಯೊಂದಿಗೆ, ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು), ಇವರ ಡಿಸಿಆರ್‌ಜಿಯಿಂದ ವಸೂಲಿ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1319 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್(ಈಗ ನಿವೃತ್ತರು) ಸೋಮವಾರಪೇಟೆ ತಾಲ್ಲೂಕು ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕ,ತಾಲ್ಲೂಕು ಕಛೇರಿ, ಸೋಮವಾರಪೇಟೆ, ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆ ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕ, ತಾಲ್ಲೂಕು ಕಛೇರಿ, ಸೋಮವಾರಪೇಟೆ, ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ.ಆರ್‌ಡಿ 66 ಎಡಿಇ 99,ದಿನಾಂಕ:11.7.2000
2) ವಿಚಾರಣಾಧಿಕಾರಿಯವರ ದಿನಾಂಕ:12-02-2002 ರ ವಿಚಾರಣಾ ವರದಿ
3) ದಿನಾಂಕ:14-03-2005ರ ಎರಡನೇ ಕಾರಣ ಕೇಳುವ ನೋಟೀಸ್ ಸಂ.ಕಂಇ 66 ಎಡಿಇ 99.
4) ಶ್ರೀ ಹೆಚ್.ಕೆ.ಸುಂದರ್,ದ್ವಿತೀಯ ದರ್ಜೆ ಸಹಾಯಕ,ಇವರ ಲಿಖಿತ ಹೇಳಿಕೆ.
5) ದಿನಾಂಕ:05-05-2006ರ ಕೊಡಗು ಜಿಲ್ಲಾಧಿಕಾರಿಗಳ ಪತ್ರ ಸಂ. ಸಿಬ್ಬಂದಿ(2)/ಸಿಆರ್/34/98-99.
6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ.ಪಿಎಸ್‌ಸಿ 116 ಸಿಎನ್‌ಎಸ್ 05, ದಿನಾಂಕ: 01-07-2006.

**ಪ್ರಸ್ತಾವನೆ:-**

ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು) ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು, ಇವರುಗಳು ಸೋಮವಾರಪೇಟೆ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸು ತ್ತಿದ್ದಾಗ 1995-96 ಮತ್ತು 1999ನೇ ಸಾಲಿನಲ್ಲಿ ಸುಮಾರು 63 ಪ್ರಕರಣಗಳಲ್ಲಿ ಕ್ರಮಬದ್ಧವಾಗಿ ಕಡತಗಳನ್ನು ತಯಾರಿಸದೆ ದಾಖಲೆಗಳನ್ನು ಆಧಾರವಾಗಿ ತೆಗೆದುಕೊಳ್ಳದೇ ಸಿಆರ್‌ಸಿ ರಿಜಿಸ್ಟರ್‌ನಲ್ಲಿ ದಾಖಲು ಮಾಡಿಕೊಳ್ಳದೆ ಮುದ್ರಾಂಕ ಶುಲ್ಕ ಸಿಆರ್‌ಸಿ ಶುಲ್ಕ ಹಾಗೂ ಇಂಥಳ ಕಂದಾಯ ವಸೂಲಿ ಮಾಡದೆ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುವುದಲ್ಲದೆ ಶಸ್ತ್ರಾಸ್ತ್ರ ಕಾಯ್ದೆ 1959 ರ ನಿಯಮಗಳನ್ನು ಪಾಲಿಸದೆ ಕೋವಿ ಲೈಸೆನ್ಸಗಳನ್ನು ನಿಯಮಬಾಹಿರವಾಗಿ ಮಂಜೂರು ಮಾಡಿರುವುದು ಇಂತಹ ಗುರುತರವಾದ ಆರೋಪಗಳ ಮೇಲೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರ.ಸಂ.(1) ರಲ್ಲಿ ಓದಲಾದ ದಿನಾಂಕ:11-07-2000ದ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸದರಿ ಆದೇಶದನ್ವಯ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿ, ಮೇಲೆ ಕ್ರ.ಸಂ.(2) ರಲ್ಲಿ ಓದಲಾದ ದಿನಾಂಕ:12.02.2002 ರ ತಮ್ಮ ವಿಚಾರಣಾ ವರದಿಯಲ್ಲಿ ಇವರುಗಳ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದು ಸಮರ್ಪಕವಾಗಿ ಕಂಡು ಬಂದ ಕಾರಣ, ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ: 14-03-2005 ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಸದರಿ ಆಪಾದಿತ ನೌಕರರಾದ ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕ ಇವರಿಗೆ ಜಾರಿಗೊಳಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಮೇಲೆ ಕ್ರ.ಸಂ.(4) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕ, ಇವರು ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ವಿರುದ್ಧ ಮಾಡಿರುವ ಎಲ್ಲಾ ಆರೋಪಗಳನ್ನು ತಳ್ಳಿ ಹಾಕಿದ್ದಾರೆ. ಹಾಗೂ ತಮ್ಮನ್ನು ಸರ್ಕಾರದ ಸೇವೆಯಿಂದ ವಜಾ ಮಾಡಬಾರದಾಗಿ ವಿನಂತಿಸಿರುತ್ತಾರೆ.

ಮೇಲೆ ಕ್ರ.ಸಂ.(5) ರಲ್ಲಿ ಓದಲಾದ ದಿನಾಂಕ:05-05-2006ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶ್ರೀ ಈರಯ್ಯ, ಹಿಂದಿನ ತಹಶೀಲ್ದಾರ್, ಸೋಮವಾರಪೇಟೆ (ಈಗ ನಿವೃತ್ತರು) ಮತ್ತು ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು, ಇವರುಗಳಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾದ ಬಗ್ಗೆ ಮಾಹಿತಿ ಸಲ್ಲಿಸಿ ಒಟ್ಟು ರೂ.28,659.21ಗಳು ಸರ್ಕಾರಕ್ಕೆ ನಷ್ಟ ಉಂಟಾಗಿದೆಯೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (6) ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು, ಸರ್ಕಾರವು ಆಪಾದಿತ ಸರ್ಕಾರಿ ಅಧಿಕಾರಿ/ನೌಕರರಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಗೆ ಸಹಮತಿಸಿದ್ದು, ಆಪಾದಿತರುಗಳಿಂದ ಸರ್ಕಾರಕ್ಕೆ ಆದ ನಷ್ಟ ರೂ.28,659.21 (ರೂಪಾಯಿಗಳು ಇಪ್ಪತ್ತೆಂಟು ಸಾವಿರದ ಆರುನೂರ ಐವತ್ತೊಂಬತ್ತು ಮತ್ತು ಪೈಸೆ ಇಪ್ಪತ್ತೊಂದು ಮಾತ್ರ) ಅನ್ನು ಶೇ.8 ರ ಬಡ್ಡಿಯೊಂದಿಗೆ ವಸೂಲಿ ಮಾಡುವಂತೆ ತನ್ನ ಅಭಿಪ್ರಾಯ ನೀಡಿರುತ್ತದೆ.

ಈ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿನ ವಿಚಾರಣಾ ವರದಿಯ ಆಧಾರದ ಮೇಲೆ ಹಾಗೂ ಅವರ ವಿರುದ್ಧದ ಗುರುತರ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಈ ಮೇಲ್ಕಂಡ ನೌಕರರಾದ ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು, ಇವರು ಕರ್ತವ್ಯ ಚ್ಯುತಿ ಎಸಗಿರುವುದು ಹಾಗೂ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿರುವುದು ಸಾಬೀತಾಗಿರುವುದರಿಂದ ಸರ್ಕಾರವು ಸೂಕ್ತ ದಂಡನೆಯನ್ನು ವಿಧಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 66 ಎಡಿಇ 99, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2006.**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಯ ನಿಯಮ 13 ನ್ನು 11 ಮತ್ತು 11 (ಎ) ರೊಡನೆ ಓದಿಕೊಂಡಂತೆ ಸದರಿ ನಿಯಮಗಳ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಕೆ. ಸುಂದರ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕಛೇರಿ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಸರ್ಕಾರಕ್ಕೆ ಸಂಭವಿಸಿದ ಆರ್ಥಿಕ ನಷ್ಟ ರೂ.28,659.21ರ ಪೈಕಿ ರೂ.14,329.60 (ರೂಪಾಯಿ ಹದಿನಾಲ್ಕು ಸಾವಿರದ ಮುನ್ನೂರ ಇಪ್ಪತ್ತೊಂಬತ್ತು ಪೈಸೆ ಅರವತ್ತನ್ನು ಮಾತ್ರ) ಅನ್ನು ಆರ್ಥಿಕ ನಷ್ಟ ಸಂಭವಿಸಿದ ದಿನಾಂಕದಿಂದ ಶೇ.8ರ ಬಡ್ಡಿಯೊಂದಿಗೆ ನಿಯಮಾನುಸಾರ arrears of land revenue ಎಂದು ಜಿಲ್ಲಾಧಿಕಾರಿಗಳು ವಸೂಲಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 1326

**ಶಿಕ್ಷಣ ಸಚಿವಾಲಯ**

**ವಿಷಯ:** ಕಾಲೇಜು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ, ಯುಜಿಸಿ ಕಾರ್ಯಗಳು ಹಾಗೂ ನ್ಯಾಕ್ ಮೌಲ್ಯ ಮಾಪನ ಕಾರ್ಯಗಳ ಉಸ್ತುವಾರಿಗಾಗಿ ಡಾ.ವೈ.ಎಂ.ಜಯರಾಜು, ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಗುಲ್ಬರ್ಗ ವಿಶ್ವವಿದ್ಯಾಲಯ, ಅವರನ್ನು ಅನ್ಯಕಾರ್ಯದ ನಿಮಿತ್ತ ಮಾಡಲಾಗಿದ್ದ ನೇಮಕಾತಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಕಾಲೇಜು ಶಿಕ್ಷಣ ಆಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ:ಕಾಶಿಆ:ಆಆಶಾ:ಎಸ್.ಎಲ್.ಎಸ್:49:2003 ದಿನಾಂಕ 21-07-2003.
2) ಗುಲ್ಬರ್ಗ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: GUG/RPS/CCE/2003-04/19 ದಿನಾಂಕ 21-06-2003.
3) ಸರ್ಕಾರಿ ಆದೇಶ ಸಂಖ್ಯೆ:ಇಡಿ 156 ಡಿಸಿಇ 2003 ದಿನಾಂಕ 23-08-2003.
4) ಅರೆ ಸರ್ಕಾರಿ ಪತ್ರ ಸಂಖ್ಯೆ:ಕಾಶಿಇ 05/ಇಪಿಆರ್/2002 ಸಿವಿ-1 ದಿನಾಂಕ 10-10-2005.
5) ಸರ್ಕಾರದ ಆದೇಶ ಸಂಖ್ಯೆ:ಇಡಿ 202 ಡಿಸಿಇ 2005 ದಿನಾಂಕ 22-11-2005.
6) ಗುಲ್ಬರ್ಗಾ ವಿಶ್ವವಿದ್ಯಾಲಯದ ಪತ್ರ ಸಂಖ್ಯೆ: GUG/Adm/Est(T)/2006-07/937 ದಿನಾಂಕ: 4/10-07-2006.

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯ ಸಮಗ್ರ ಗುಣಮಟ್ಟ ನಿರ್ವಹಣೆ ಕಾರ್ಯಯೋಜನೆಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ದಿಶೆಯಲ್ಲಿ ಯು.ಜಿ.ಸಿ ಕಾರ್ಯಗಳು, ನ್ಯಾಕ್ ಮೌಲ್ಯಮಾಪನ ಹಾಗೂ ತರಬೇತಿ ಮತ್ತು ಕಾರ್ಯಾಗಾರಗಳನ್ನು ಏರ್ಪಡಿಸುವುದು ಮುಂತಾದ ಕಾರ್ಯಗಳನ್ನು ಕೈಗೊಳ್ಳಲು ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಡಾ.ವೈ.ಎಂ.ಜಯರಾಜುರವರನ್ನು ಅವರ ಸ್ವಂತ ವೇತನ ಮತ್ತು ಶ್ರೇಣಿಯೊಂದಿಗೆ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ಆಯುಕ್ತರ ಕಛೇರಿಗೆ ಅನ್ಯ ಕಾರ್ಯ ನಿಮಿತ್ತ (OOD ಮೇಲೆ) ಪಡೆಯಲು ಆಯುಕ್ತರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 21-07-2003ರ ತಮ್ಮ ಪತ್ರದಲ್ಲಿ ಪ್ರಸ್ತಾಪಿಸಿದ್ದರು.

ಗುಲ್ಬರ್ಗಾ ವಿಶ್ವವಿದ್ಯಾಲಯವು ಡಾ.ವೈ.ಎಂ.ಜಯರಾಜುರವರ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಗೆ 2 ವರ್ಷಗಳ ಅವಧಿಗೆ OOD ಮೇಲೆ ಕಳುಹಿಸಿ, ಅವರ ವೇತನ ಹಾಗೂ ಭತ್ಯೆಗಳನ್ನು ವಿಶ್ವವಿದ್ಯಾಲಯವೇ ಬರಿಸಿ ಸಹಕರಿಸಲು ಮೇಲೆ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ 21-06-2003ರ ಪತ್ರದಲ್ಲಿ ತನ್ನ ಒಪ್ಪಿಗೆ ನೀಡಿತ್ತು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ 23-08-2003ರ ಆದೇಶದಲ್ಲಿ ಡಾ.ವೈ.ಎಂ.ಜಯರಾಜು, ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಗುಲ್ಬರ್ಗ ವಿಶ್ವವಿದ್ಯಾಲಯ ಅವರನ್ನು ಅವರದೇ ಸ್ವಂತ ವೇತನ ಹಾಗು ಗ್ರೇಡ್‌ನಲ್ಲಿ ಅನ್ಯಕಾರ್ಯ ನಿಮಿತ್ತ (OOD) ತಾತ್ಕಾಲಿಕವಾಗಿ ದಿನಾಂಕ 23-08-2003ರಿಂದ 2 ವರ್ಷದ ಅವಧಿಗೆ ಕಾಲೇಜು ಶಿಕ್ಷಣ ಆಯುಕ್ತರ ಕಛೇರಿಯಲ್ಲಿ ನೇಮಿಸಲಾಗಿರುತ್ತದೆ.

ಕ್ರಮಾಂಕ (5)ರಲ್ಲಿ ಓದಲಾದ ದಿನಾಂಕ 22-11-2005ರ ಆದೇಶದಲ್ಲಿ ಡಾ:ವೈ.ಎಂ.ಜಯರಾಜು, ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಅವರನ್ನು ಮತ್ತೆ 30-06-2007ರವರೆಗೆ ಮುಂದುವರೆಸಲಾಗಿತ್ತು.

ಕ್ರಮಾಂಕ (6)ರಲ್ಲಿ ಓದಲಾದ ರಿಜಿಸ್ಟ್ರಾರ್, ಗುಲ್ಬರ್ಗಾ ವಿಶ್ವವಿದ್ಯಾಲಯ, ಅವರ ಪತ್ರದಲ್ಲಿ ಡಾ:ವೈ.ಎಂ.ಜಯರಾಜು ಅವರು ವಹಿಸಿದ ಕರ್ತವ್ಯವನ್ನು ಪರಿಣಾಮಕಾರಿಯಾಗಿ ನಿರ್ವಹಿಸುತ್ತಿದ್ದು, ಪ್ರಗತಿಯಲ್ಲಿರುವ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಇವರ ಸೇವೆಯು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ನಿಶ್ಚಯವಾಗಿ ಅಗತ್ಯವಿರುವುದರಿಂದ ಅವರ ಸೇವೆಯನ್ನು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ಹಿಂತಿರುಗಿಸುವಂತೆ ಕೋರಿರುತ್ತಾರೆ.

ರಿಜಿಸ್ಟ್ರಾರ್ ಗುಲ್ಬರ್ಗ ವಿಶ್ವವಿದ್ಯಾಲಯ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 202 ಡಿಸಿಇ 2005, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2006**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಇಡಿ 202 ಡಿಸಿಇ 2005 ದಿನಾಂಕ:22-11-2005ರ ಆದೇಶವನ್ನು ಮಾರ್ಪಡಿಸಿ ಡಾ.ವೈ.ಎಂ.ಜಯರಾಜು ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರು, ಗುಲ್ಬರ್ಗ ವಿಶ್ವವಿದ್ಯಾಲಯ, ಇವರು OODಯ ಆಧಾರದ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ವಾಪಸ್ಸುಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1360

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

**ವಿಷಯ:** ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ 02 ತತ್ವಶಾಸ್ತ್ರ ಉಪನ್ಯಾಸಕರ ಹುದ್ದೆಗಳನ್ನು ಪರಿವರ್ತಿಸುವ ಬಗ್ಗೆ.

**ಓದಲಾಗಿದೆ:** ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ 407 ಮಾಹಿತಿ 2002-03 : ಸಿವಿ-3, ದಿನಾಂಕ: 20-10-2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ 168 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, 300 ಖಾಸಗಿ ಅನುದಾನಿತ ಕಾಲೇಜುಗಳು ಹಾಗೂ 532 ಖಾಸಗಿ ಅನುದಾನರಹಿತ

ಕಾಲೇಜುಗಳು ವ್ಯಾಪ್ತಿಯಲ್ಲಿದ್ದು, ಸುಮಾರು 2,85,000 ವಿದ್ಯಾರ್ಥಿಗಳು ಪ್ರವೇಶ ಪಡೆದಿರುವುದಾಗಿ, ಸುಮಾರು 17,000 ಬೋಧಕ ಹಾಗೂ ಬೋಧಕೇತರರು ಈ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿರುವುದಾಗಿ ತಿಳಿಸಿದ್ದಾರೆ. ಇಲಾಖೆಯ ಕೆಲಸಕಾರ್ಯಗಳ ಜೊತೆಗೆ ಅಂಕಿ ಅಂಶಗಳನ್ನು ಸಂಗ್ರಹಿಸಲು ಹಾಗೂ Selected Educational Statistics ಗೆ ಮಾಹಿತಿ ಒದಗಿಸಲು ಇಲಾಖೆಯಲ್ಲಿ ಮಂಜೂರಾದ 09 ತತ್ವಶಾಸ್ತ್ರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಉಪ ನಿರ್ದೇಶಕರಾಗಿ ಮತ್ತು ಇನ್ನೊಂದು ಹುದ್ದೆಯನ್ನು ಸಾಂಖ್ಯಿಕ ಇಲಾಖೆಗೆ encadre post ಗಳಾಗಿ ಪರಿವರ್ತಿಸಿ, ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ಸಹ ನಿರ್ದೇಶಕರ ಹುದ್ದೆಯನ್ನು Nodal Agency ಯಡಿಯಲ್ಲಿ ಕಾರ್ಯನಿರ್ವಹಿಸಲು ಮತ್ತು ಈ ಬಗ್ಗೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿಲ್ಲದೇ ಇರುವುದರಿಂದಾಗಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಅಗತ್ಯ ಕಾರ್ಯಭಾರ ಇಲ್ಲದೇ ಖಾಲಿ ಇರುವ 02 ತತ್ವಶಾಸ್ತ್ರ ಉಪನ್ಯಾಸಕರುಗಳ ಹುದ್ದೆಗಳನ್ನು ಶಾಶ್ವತವಾಗಿ 01 ಹುದ್ದೆಯನ್ನು ಉಪ ನಿರ್ದೇಶಕ ಹುದ್ದೆಯನ್ನಾಗಿಯೂ ಮತ್ತೊಂದು ಹುದ್ದೆಯನ್ನು ಸಹಾಯಕ ನಿರ್ದೇಶಕ ಹುದ್ದೆಯಾಗಿ ಪರಿವರ್ತಿಸಿ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಗೆ encadre post ಗಳಾಗಿ ಪರಿವರ್ತಿಸುವ ಕುರಿತು ಪ್ರಸ್ತಾಪಿಸಿದ್ದಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 207 ಡಿಸಿಇ 2005 (ಪಿ), ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2006.**

ಪ್ರಸ್ತಾವನೆ ಭಾಗದಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಕಾಲೇಜು ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕಾಲೇಜುಗಳಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ Selected Educational Statistics ಗೆ ಮಾಹಿತಿ ಒದಗಿಸಲು, ನೋಡಲ್ ಏಜೆನ್ಸಿಯಲ್ಲಿ ಕಾರ್ಯನಿರ್ವಹಿಸಲು ಕಾಲೇಜು ಶಿಕ್ಷಣ ಇಲಾಖೆಗೆ ಅನುವಾಗಲು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ 2 ತತ್ವಶಾಸ್ತ್ರ ಉಪನ್ಯಾಸಕರ ಹುದ್ದೆಗಳ ಪೈಕಿ, ಒಂದು ಹುದ್ದೆಯನ್ನು ವೇತನ ಶ್ರೇಣಿ ರೂ.7400–13120ರಲ್ಲಿ ಉಪ ನಿರ್ದೇಶಕರು (ಅಂಕಿ ಅಂಶ) ಹುದ್ದೆಯನ್ನಾಗಿಯೂ, ಮತ್ತೊಂದು ಹುದ್ದೆಯನ್ನು ವೇತನ ಶ್ರೇಣಿ ರೂ.6000–11200ರಲ್ಲಿ ಸಹಾಯಕ ನಿರ್ದೇಶಕರ (ಅಂಕಿ–ಅಂಶ) ಹುದ್ದೆಯನ್ನಾಗಿ ಪರಿವರ್ತಿಸಿ ಆದೇಶಿಸಲಾಗಿದೆ. ಉಪನ್ಯಾಸಕರ ವೃಂದ ಬಲದಲ್ಲಿ ತತ್ವಶಾಸ್ತ್ರದ ಉಪನ್ಯಾಸಕ 2 ಹುದ್ದೆಗಳನ್ನು ಕಡಿತಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2397 ವೆಚ್ಚ–8/2005, ದಿನಾಂಕ:13–03–2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1279

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ.

**ವಿಷಯ:** ಯು.ಜಿ.ಸಿ ಮಾರ್ಗಸೂಚಿಗಳನ್ವಯ ಎಂ.ಫಿಲ್ ನ್ನು ದಿನಾಂಕ:31–12–93ರೊಳಗೆ ಮುಗಿಸಿರುವ ಅಥವಾ ದಿನಾಂಕ:31–12–2002ರೊಳಗೆ ಪಿ.ಹೆಚ್.ಡಿ ಗೆ ಥೀಸಿಸ್ ಸಲ್ಲಿಸಿದ್ದು ಪಿಹೆಚ್.ಡಿ ಪಾಸು ಮಾಡಿರುವ ಅರೆಕಾಲಿಕ ಉಪನ್ಯಾಸಕರುಗಳನ್ನು ಯು.ಜಿ.ಸಿ ವೇತನ ಶ್ರೇಣಿಯಲ್ಲಿ ಸೇವಾ ವಿಲೀನತೆಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 48 ಎಸ್‌ಆರ್ಇ 96, ದಿನಾಂಕ: 22–01–97
2) ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 55 ಎಸ್‌ಆರ್ಇ 2001, ದಿನಾಂಕ:09–07–2002
3) ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 89 ಡಿಸಿಇ 97, ದಿನಾಂಕ: 23–06–2003
4) ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 180 ಡಿಸಿಇ 2003, ದಿನಾಂಕ: 18–10–2003
5) ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 108 ಡಿಸಿಇ 2005, ದಿನಾಂಕ: 12–07–2005.
6) ಸಂಖ್ಯೆ:ಇಡಿ 108 ಡಿಸಿಇ 2005, ದಿನಾಂಕ:26–07–2005.
7) ಸಂಖ್ಯೆ:ಇಡಿ 138 ಡಿಸಿಇ 2005, ದಿನಾಂಕ:21–09–2005
8) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ:ಕಾಶಿಇ 286 ಪಿಟಿಎಲ್ 2004 : ಸಿವಿ, ದಿನಾಂಕ: 15–04–2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ:22–01–97ರ ಅಧಿಸೂಚನೆಯನ್ವಯ ಸಾಮಾನ್ಯ ಅಭ್ಯರ್ಥಿಗಳು 1993–94 ಮತ್ತು 1994–95ನೇ ಸಾಲಿನಲ್ಲಿ ಹಾಗೂ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಅಭ್ಯರ್ಥಿಗಳು 1993–94ಅಥವಾ 1994–95ನೇ ಸಾಲಿನಲ್ಲಿ ಯಾವುದಾದರೂ ಒಂದು ವರ್ಷ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿರುವವರು ಇಲಾಖೆಯ ಉಪನ್ಯಾಸಕರ ಹುದ್ದೆಯಲ್ಲಿ ಸೇವಾ ವಿಲೀನಗೊಳ್ಳಲು ಅರ್ಹತೆ ಪಡೆದಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಅಧಿಸೂಚನೆಯಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯದ ದಿನಾಂಕ: 04–01–2001ರ ತೀರ್ಪಿನಂತೆ ಸರ್ಕಾರಿ ವಿಶೇಷ ತಿದ್ದುಪಡಿ ನಿಯಮಗಳಲ್ಲಿ ಎನ್.ಇ.ಟಿ ಪರೀಕ್ಷೆಯನ್ನು ದಿನಾಂಕ: 09–07–2005ರೊಳಗೆ ಪಾಸು ಮಾಡಬೇಕೆಂಬ ಷರತ್ತನ್ನು ವಿಧಿಸಲಾಗಿರುತ್ತದೆ. ಈ ನಿಯಮಗಳನ್ವಯ ಮೇಲೆ ಓದಲಾದ ಕ್ರಮಾಂಕ (3) ಮತ್ತು (4)ರ ಅಧಿಸೂಚನೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಿಗೆ ಎನ್.ಇ.ಟಿ ಪರೀಕ್ಷೆಯನ್ನು ದಿನಾಂಕ:09–07–2005 ರೊಳಗೆ ಪಾಸು ಮಾಡುವ ಷರತ್ತಿಗೊಳಪಟ್ಟು ರಾಜ್ಯ ವೇತನ ಶ್ರೇಣಿ ರೂ.6000–11200 ರಲ್ಲಿ ಇಲಾಖೆಯ ಉಪನ್ಯಾಸಕರ ಹುದ್ದೆಯಲ್ಲಿ ಸೇವಾ ಸಕ್ರಮಾತಿಗೊಳಿಸಲಾಗಿರುತ್ತದೆ.

ದಿನಾಂಕ: 23–06–2003ರ ಸಂಖ್ಯೆ:ಇಡಿ 89 ಡಿಸಿಇ 97ರ ಸರ್ಕಾರಿ ಅಧಿಸೂಚನೆಯಲ್ಲಿ ಈ ಕೆಳಕಂಡ ಉಪನ್ಯಾಸಕರುಗಳು ಪಿಹೆಚ್.ಡಿ ಪದವಿಯನ್ನು ಪೂರೈಸಿದ್ದರೂ : ಥೀಸೀಸ್ ಸಲ್ಲಿಸಿದ್ದರೂ ಸಹ ಅವರುಗಳಿಗೆ ರಾಜ್ಯ ವೇತನ ಶ್ರೇಣಿ ರೂ.6000–11200ರಲ್ಲಿ ಇಲಾಖೆಯ ಉಪನ್ಯಾಸಕರ ಹುದ್ದೆಯಲ್ಲಿ ಸೇವಾ ಸಕ್ರಮಗೊಳಿಸಲಾಗಿರುತ್ತದೆ

01 ಡಾ:ಸಮೀಉಲ್ಲಾಸಾಬ್,
ಹಿಂದಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,ಬಳ್ಳಾರಿ,
02 ಡಾ:ಜಯಕುಮಾರ್ ಸಿಂಧೆ,
ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಮಲಾಪುರ,
03 ಡಾ:ಶ್ರೀದೇವಿ.ವಿ.ಪಿ,
ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಹುಬ್ಬಳ್ಳಿ
04 ಡಾ:ವಸುಮಾ.ಎಂ.ಜಿ,
ಭೂಗೋಳಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು,

ದಿನಾಂಕ: 18-10-2003ರ ಸಂಖ್ಯೆ:ಇಡಿ 180 ಡಿಸಿಇ 2003 ಸರ್ಕಾರಿ ಆದೇಶದಲ್ಲಿ ಪಿಹೆಚ್.ಡಿ ಥೀಸೀಸನ್ನು ದಿನಾಂಕ: 31-12-2002ರೊಳಗೆ ಸಂಬಂಧಪಟ್ಟ ವಿಶ್ವವಿದ್ಯಾಲಯಗಳಿಗೆ ಸಲ್ಲಿಸಿ ನಂತರ ಪಿಹೆಚ್.ಡಿ ಪದವಿ ಪಡೆದ ಈ ಉಪನ್ಯಾಸಕರುಗಳಿಗೆ ರೂ.6000-11200ರ ರಾಜ್ಯ ವೇತನ ಶ್ರೇಣಿಯಲ್ಲಿ ಸೇವಾ ಸಕ್ರಮಾತಿಗೊಳಿಸಲಾಗಿರುತ್ತದೆ.

(01) ಡಾ;ಸಿದ್ದಪ್ಪ.ಕೆ,
ಅರ್ಥಶಾಸ್ತ್ರ ಉಪನ್ಯಾಸಕರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಗರಿಬೊಮ್ಮನಹಳ್ಳಿ
(02) ಡಾ: ಕೆ.ಪ್ರಮೋದ್ ಗೊಂಚ್‌ಕಾರ
ವಾಣಿಜ್ಯಶಾಸ್ತ್ರ ಉಪನ್ಯಾಸಕರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಳೆಯಂಗಡಿ.

ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ:12-07-2005ರ ಅಧಿಸೂಚನೆಯಲ್ಲಿ ಉಪನ್ಯಾಸಕರ ಹುದ್ದೆಗಳಲ್ಲಿ ಸೇವಾ ವಿಲೀನತೆಗೊಳಿಸಲ್ಪಟ್ಟ ಅಂದರೆ ಎನ್.ಇ.ಟಿ : ಎಸ್.ಎಲ್.ಇ.ಟಿ ತೇರ್ಗಡೆ ಹೊಂದಿರುವ ಮೇಲ್ಕಂಡ ಅರೆಕಾಲಿಕ ಉಪನ್ಯಾಸಕರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಬಿಡುಗಡೆಗೊಳಿಸಲಾಗಿರುತ್ತದೆ. ಈ ಅಧಿಸೂಚನೆಯಿಂದ ಭಾಧಿತರಾದ ಶ್ರೀ ಶಿವರಾಜ್ ಮತ್ತು ಇತರೆ 391 ಉಪನ್ಯಾಸಕರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಈ ಅರ್ಜಿಯನ್ನು ನ್ಯಾಯ ಮಂಡಳಿಯು ಪರಿಶೀಲಿಸಿ ದಿನಾಂಕ:13-7-2005 ರಂದು ಮಧ್ಯಂತರ ತೀರ್ಪನ್ನು ನೀಡಿದೆ. ಈ ತೀರ್ಪಿನ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (6)ರ ದಿನಾಂಕ:13-07-2005ರಂದು ಮತ್ತು ನಂತರ ಬಿಡುಗಡೆಗೊಳಿಸಲ್ಪಟ್ಟ ಅರೆಕಾಲಿಕ ಉಪನ್ಯಾಸಕರು ದಾಖಲಿಸಿದ್ದ ಕೆ.ಎ.ಟಿ ಯಲ್ಲಿನ ಅರ್ಜಿ ಸಂಖ್ಯೆ:5194-5585:2005ರ ಪ್ರಕರಣದಲ್ಲಿ ನೀಡುವ ಮುಂದಿನ ಆದೇಶವನ್ನು ಬಾಕಿ ಇಟ್ಟು ಪುನಃ ಈ 06 ಅರೆಕಾಲಿಕ ಉಪನ್ಯಾಸಕರನ್ನು ಸೇವೆಗೆ ತೆಗೆದುಕೊಳ್ಳಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (7)ರ ಪತ್ರದನ್ವಯ ದಿನಾಂಕ:31-12-2002ರೊಳಗೆ ಥೀಸೀಸ್ ಸಲ್ಲಿಸಿದ್ದು ಪಿಹೆಚ್.ಡಿ ಪಾಸು ತೇರ್ಗಡೆ ಹೊಂದಿರುವ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ ಪಾಸು ಮಾಡುವಿಕೆಯಿಂದ ವಿನಾಯ್ತಿ ನೀಡಿರುವುದರಿಂದ ಈ ಮೇಲ್ಕಂಡ ಅರೆಕಾಲಿಕ ಉಪನ್ಯಾಸಕರಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ಸೇವಾ ಸಕ್ರಮಗೊಳಿಸಿರುವುದನ್ನು ಮಾರ್ಪಾಡಿಸಿ ಯು.ಜಿ.ಸಿ ವೇತನ ಶ್ರೇಣಿಯನ್ನು ನಿಗಧಿಗೊಳಿಸುವಂತೆ ಮೇಲೆ ಓದಲಾದ ಕ್ರಮಾಂಕ (8)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಕೋರಿರುತ್ತಾರೆ.

ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 138 ಡಿಸಿಇ 2005, ಬೆಂಗಳೂರು, ದಿನಾಂಕ: 16ನೇ ಆಗಸ್ಟ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಡಿ 89 ಡಿಸಿಇ 97, ದಿನಾಂಕ: 23-06-2003ರ ಅಧಿಸೂಚನೆಯಲ್ಲಿನ

01 ಡಾ:ಸಮೀಉಲ್ಲಾಸಾಬ್,
ಹಿಂದಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,ಬಳ್ಳಾರಿ,
02 ಡಾ:ಜಯಕುಮಾರ್ ಸಿಂಧೆ,
ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಮಲಾಪುರ,
03 ಡಾ:ಶ್ರೀದೇವಿ.ವಿ.ಪಿ,
ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಹುಬ್ಬಳ್ಳಿ
04 ಡಾ:ವಸುಮಾ.ಎಂ.ಜಿ,
ಭೂಗೋಳಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು,

ಹಾಗೂ ಸಂಖ್ಯೆ: ಇಡಿ 180 ಡಿಸಿಇ 2003, ದಿನಾಂಕ:18-10-2003ರ ಅಧಿಸೂಚನೆಯಲ್ಲಿನ

05 ಡಾ;ಸಿದ್ದಪ್ಪ.ಕೆ, ಅರ್ಥಶಾಸ್ತ್ರ ಉಪನ್ಯಾಸಕರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಗರಿಬೊಮ್ಮನಹಳ್ಳಿ
06 ಡಾ: ಕೆ.ಪ್ರಮೋದ್ ಗೊಂಚ್‌ಕಾರ,
ವಾಣಿಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಳೇಯಂಗಡಿ.

ಇವರುಗಳಿಗೆ ಈಗಾಗಲೇ ನೀಡಲಾದ ರಾಜ್ಯ ವೇತನ ಶ್ರೇಣಿಯನ್ನು ಮಾರ್ಪಡಿಸಿ, ಯು.ಜಿ.ಸಿ ವೇತನ ಶ್ರೇಣಿ ರೂ. 8000–275–13500ರಲ್ಲಿ ಪುನರ್ ನಿಗದಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1280

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ–4,
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿತ್ತಾಪೂರ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ ಕಾಮಗಾರಿಗಳಲ್ಲಿ ಅವ್ಯವಹಾರ ಎಸೆಗಿರುವರೆನ್ನಲಾದ ಅಧಿಕಾರಿ / ನೌಕರರಗಳ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಪಂರಾಇಂ ಇಲಾಖೆ,ಬೆಂಗಳೂರು ಇವರ ಪತ್ರ ಸಂ. ಮುಇಂ:ಬೆಂ: ಸಿಬ್ಬಂದಿ-7:7982:05-06, ದಿ. 22-3-06.

2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ 12 ಇಎನ್‌ಕ್ಯೂ 06, ದಿ. 23-05-2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) , ದಿನಾಂಕ. 22-3-06 ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಚಿತ್ತಾಪುರ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿಗಳು ಮತ್ತು ಸಿಬ್ಬಂದಿ 2003-04ನೇ ಆರ್ಥಿಕ ಸಾಲಿನಲ್ಲಿ ಸರ್ಕಾರದಿಂದ ಸಾರ್ವಜನಿಕರಿಗಾಗಿ ಹಲವಾರು ಯೋಜನೆಗಳಿಗಾಗಿ ಬಿಡುಗಡೆ ಮಾಡಿದ್ದ ಅನುದಾನದಲ್ಲಿ ಕಾಮಗಾರಿಗಳನ್ನು ನಿರ್ವಹಿಸಿ, ಇಲಾಖೆಗೆ ವಹಿಸಿಕೊಡಬೇಕಾಗಿದ್ದು , ಈ ಅಧಿಕಾರಿಗಳ ಕರ್ತವ್ಯ ನಿರ್ಲಕ್ಷತೆಯಿಂದ ಹಲವಾರು ಯೋಜನೆಗಳು ವಿಫಲವಾಗಿದ್ದು, ಇದಕ್ಕೆ ಇವರೇ ನೇರ ಜವಾಬ್ದಾರರೆಂದು ತಿಳಿಸುತ್ತಾ ಇವರುಗಳ ಮೇಲೆ ದೋಷಾರೋಪಣಾ ಪಟ್ಟಿ ತಯಾರಿಸಿ ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಕಳುಹಿಸಿ ಕೊಟ್ಟಿದ್ದರು.

1. ಶ್ರೀ ಮರೆಪ್ಪಾ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ)
2. ಶ್ರೀ ಕೆ. ಭೀಮರೆಡ್ಡಿ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
3. ಶ್ರೀ ಶಶಿಕಾಂತ ಘನಾತೆ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
4. ಶ್ರೀ ಗೋಪಾಲ ರಾಠೋಡ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
5. ಶ್ರೀ ಗುರುರಾಜ ಹರವಾಳಕರ, ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
6. ಶ್ರೀ ಶಿವಲಿಂಗಪ್ಪ ಎನ್., ಅಂದಿನ ಕಿರಿಯ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.
7. ಮೊನಪ್ಪಾ, ಅಂದಿನ ಸಹಾಯಕ ಇಂಜಿನಿಯರ್, ಪಂರಾಇಂ ಉಪ ವಿಭಾಗ, ಚಿತ್ತಾಪೂರ.

ಸರ್ಕಾರವು ಮುಖ್ಯ ಇಂಜಿನಿಯರ್‌ರವರ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2), ದಿನಾಂಕ: 23-05-06 ರ ಆದೇಶದಲ್ಲಿ ಸರ್ಕಾರವು ಸದರಿ ನೌಕರರುಗಳ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ನಿರ್ಧರಿಸಿ, ಶ್ರೀ ಮರೆಪ್ಪಾ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ನಿವೃತ್ತರಾಗಿದ್ದರಿಂದ ಅವರನ್ನುಳಿದು ಇತರ ಆರು ಮಂದಿ ಇಂಜಿನಿಯರ್‌ಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಅಪೀಲು) ನಿಯಮ 1957ರ ನಿಯಮ 11 ರನ್ವಯ ಇಲಾಖಾ ವಿಚಾರಣೆ ಬಾಕಿ ಇಟ್ಟು ಸದರಿ ನಿಯಮಗಳ ನಿಯಮ 10 (1) (ಬಿ) ಪ್ರಕಾರ ಸೇವೆಯಿಂದ ಅಮಾನತ್ತುಗೊಂಡವರ ಪೈಕಿ 1) ಶ್ರೀ ಮಾನಪ್ಪ, ಸಹಾಯಕ ಇಂಜಿನಿಯರ್, 2) ಶ್ರೀ ಶಶಿಕಾಂತ ಘನಾತೆ, ಕಿರಿಯ ಇಂಜಿನಿಯರ್, 3) ಶ್ರೀ ಗುರುರಾಜ ಹರವಾಳಕರ, ಕಿರಿಯ ಇಂಜಿನಿಯರ್ ಮತ್ತು 4) ಶ್ರೀ ಶಿವಲಿಂಗಪ್ಪ, ಕಿರಿಯ ಇಂಜಿನಿಯರ್ ಇವರುಗಳು ಸರ್ಕಾರಕ್ಕೆ ತಮ್ಮ ಮನವಿ ಸಲ್ಲಿಸಿ ತಮ್ಮ ಅಮಾನತ್ತನ್ನು ರದ್ದುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಬೇಕೆಂದು ಕೋರಿದ್ದರು. ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಶಿವಲಿಂಗಪ್ಪ, ಕಿರಿಯ ಇಂಜಿನಿಯರ್ ಇವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಅವರ ಅಮಾನತ್ತನ್ನು ತೆರವುಗೊಳಿಸುವ ಪ್ರಶ್ನೆ ಉದ್ಭವಿಸುವುದಿಲ್ಲವೆಂದು ಹಾಗಾಗಿ ಉಳಿದ ಮೂವರ ಅಮಾನತ್ತನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 12 ಇಎನ್‌ಕ್ಯೂ 06, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957 ರ ನಿಯಮ -10ನೇ ನಿಯಮದ (5) ನೇ ಉಪ ನಿಯಮ (ಸಿ) ಪ್ರಕಾರ 1) ಶ್ರೀ ಮಾನಪ್ಪ, ಸಹಾಯಕ ಇಂಜಿನಿಯರ್, 2) ಶ್ರೀ ಶಶಿಕಾಂತ ಘನಾತೆ, ಕಿರಿಯ ಇಂಜಿನಿಯರ್, ಮತ್ತು 3) ಶ್ರೀ ಗುರುರಾಜ ಹರವಾಳಕರ, ಕಿರಿಯ ಇಂಜಿನಿಯರ್ ಇವರುಗಳ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1299

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಶ್ರೀ ಬಸವರಾಜ ಮಲಕೂಡ, ದ್ವಿ.ದ.ಸ., ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಆಳಂದ್ ಮತ್ತು ಶ್ರೀ ಮಲ್ಲಿಕಾರ್ಜುನ ಪಪ್ಪಾ, ಉಗ್ರಾಣ ಸಹಾಯಕ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಚಿಂಚೋಳಿ ಇವರುಗಳ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ- ಆದೇಶ.

**ಓದಲಾಗಿದೆ:**
1) ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ. ಜಿಪಂಇಂ:ವಿಗು:ಲೆಪಅ:2005-06:1-4, ದಿ. 28-4-2005.
2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ :21 :ಇಎನ್‌ಕ್ಯೂ :05. ದಿನಾಂಕ:24-8-05.
3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ. ಜಿಪಗು: ಆಡಳಿತ:ವಿಚಾರಣೆ:10:05-06:1713, ದಿ. 28-10-2005.
4) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ :21:ಇಎನ್‌ಕ್ಯೂ:05, ದಿ.27-03-2006.
5) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ. ಜಿಪಗು: ಆಡಳಿತ:ವಿಚಾರಣೆ:10:05-06:487, ದಿ. 1-8-2006.

**ಪ್ರಸ್ತಾವನೆ:**

ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂ.(1)ರ ದಿ. 28-4-2005ರ ತಮ್ಮ ವರದಿಯಲ್ಲಿ ಸದರಿ ವಿಭಾಗದಲ್ಲಿ ಏಪ್ರಿಲ್ 1995 ರಿಂದ ಮೇ 1999 ರವರೆಗಿನ ಅವಧಿಯಲ್ಲಿ 204-00 ಲಕ್ಷ ರೂ.ಗಳು ಉಗ್ರಾಣ ಕೊರತೆ ಕಂಡು ಬಂದಿದ್ದರಿಂದ ಪ್ರಕರಣದಲ್ಲಿ ಒಳಗೊಂಡವರ ಮೇಲೆ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11 ರಂತೆ ಇಲಾಖಾ ವಿಚಾರಣೆ ಹೂಡಲು ಪ್ರಸ್ತಾವನೆ ಸಲ್ಲಿಸಿದ್ದರು. ಸರ್ಕಾರವು ಸದರಿ ವರದಿಯನ್ನು ಪರಿಶೀಲಿಸಿ, ಸೇವೆಯಲ್ಲಿರುವ ಅಧಿಕಾರಿ / ನೌಕರರ ಮೇಲೆ ಸಿಸಿಎ ನಿಯಮಗಳ ಪ್ರಕಾರ ಮತ್ತು ಸೇವೆಯಿಂದ ನಿವೃತ್ತರಾದವರ ಮೇಲೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ಇಲಾಖಾ ವಿಚಾರಣೆ ಹೂಡಲು ಮತ್ತು ಇಲಾಖಾ ವಿಚಾರಣೆ ಹೂಡಲು ಸಾಧ್ಯವಾಗದ ಅಧಿಕಾರಿ : ನೌಕರರ ಮೇಲೆ ಸಿವಿಲ್ ಸೂಟ್ ದಾಖಲಿಸಲು ಹಾಗೂ ಈ ಪ್ರಕರಣದಲ್ಲಿ ಒಳಗೊಂಡವರೆಲ್ಲರ ಮೇಲೆ ಸಂಬಂಧಪಟ್ಟ ಪೋಲಿಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆಗಳನ್ನು ಸಹ ದಾಖಲಿಸಲು ಮತ್ತು ಸೇವೆಯಲ್ಲಿರುವ ಅಧಿಕಾರಿ : ನೌಕರರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಅವರುಗಳನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ. (2) ರ ದಿ. 24-8-2005ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿ/ ನೌಕರರುಗಳನ್ನು ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು.

1) ದಾದಾಗೌಡ ಪಾಟೀಲ, ಲೆಕ್ಕಾಧೀಕ್ಷಕರು, ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ತಾಲ್ಲೂಕು ಪಂಚಾಯತಿ, ಜೇವರ್ಗಿ.
2) ಬಸವರಾಜ ಮಲಕೂಡ, ಎರಡನೇ ದರ್ಜೆ ಸಹಾಯಕ, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಆಳಂದ.
3) ಮಲ್ಲಿಕಾರ್ಜುನಪ್ಪ, ಉಗ್ರಾಣ ಸಹಾಯಕರು, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ , ಚಿಂಚೋಳಿ.
4) ನಾರಾಯಣ ಉಡಗಿ, ದ್ವಿತೀಯ ದರ್ಜೆ ಉಗ್ರಾಣ ಸಹಾಯಕ, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಗುಲ್ಬರ್ಗಾ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿ. 28-10-2005 ರ ಪತ್ರದಲ್ಲಿ ಈ ಪ್ರಕರಣದಲ್ಲಿ ಅಮಾನತ್ತುಗೊಂಡ ಶ್ರೀ ದಾದಾಗೌಡ ಪಾಟೀಲ್, ಲೆಕ್ಕಾಧೀಕ್ಷಕರು ಮತ್ತು ಶ್ರೀ ನಾರಾಯಣ ಉಡಗಿ, ದ್ವಿ.ದ.ಉ.ಸ. ಇವರನ್ನು ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತು ತೆರವುಗೊಳಿಸಬಹುದಾಗಿದೆ ಎಂದು ವರದಿ ನೀಡಿದ್ದರ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸರ್ಕಾರವು ಶ್ರೀ ದಾದಾಗೌಡ ಪಾಟೀಲ್, ಲೆಕ್ಕಾಧೀಕ್ಷಕರು ಮತ್ತು ಶ್ರೀ ನಾರಾಯಣ ಉಡಗಿ, ದ್ವಿ.ದ.ಉ.ಸ. ಇವರುಗಳ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿತ್ತು.

ನಂತರ, ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಶ್ರೀ ಬಸವರಾಜ ಮಲಕೂಡ, ದ್ವಿ.ದ.ಸ. ಹಾಗೂ ಶ್ರೀ ಮಲ್ಲಿಕಾರ್ಜುನ ಪಪ್ಪಾ ,ಉಗ್ರಾಣ ಸಹಾಯಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಬಹುದಾಗಿದೆ ಎಂದು ವರದಿ ಮಾಡಿರುತ್ತಾರೆ.

ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ಈ ಪ್ರಕರಣದಲ್ಲಿ ಒಳಗೊಂಡವರ ಮೇಲೆ ಈಗಾಗಲೇ ಇಲಾಖಾ ವಿಚಾರಣೆ ಪ್ರಾರಂಭವಾಗಿರುವುದರಿಂದ ಶ್ರೀ ಬಸವರಾಜ ಮಲಕೂಡ, ದ್ವಿ.ದ.ಸ. ಹಾಗೂ ಶ್ರೀ ಮಲ್ಲಿಕಾರ್ಜುನ ಪಪ್ಪಾ ,ಉಗ್ರಾಣ ಸಹಾಯಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 21 ಇಎನ್‌ಕ್ಯೂ 05 ಬೆಂಗಳೂರು, ದಿನಾಂಕ : 25ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 10 (5)(ಸಿ) ರನ್ವಯ ಶ್ರೀ ಬಸವರಾಜ ಮಲಕೂಡ, ದ್ವಿ.ದ.ಸ. ಹಾಗೂ ಶ್ರೀ ಮಲ್ಲಿಕಾರ್ಜುನ ಪಪ್ಪಾ , ಉಗ್ರಾಣ ಸಹಾಯಕ, ಇವರುಗಳ ಮೇಲೆ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರುಗಳ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಿದೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಶ್ರೀ ಬಸವರಾಜ ಮಲಕೂಡ, ದ್ವಿ.ದ.ಸ. ಹಾಗೂ ಶ್ರೀ ಮಲ್ಲಿಕಾರ್ಜುನ ಪಪ್ಪಾ ,ಉಗ್ರಾಣ ಸಹಾಯಕ ಇವರುಗಳಿಗೆ ಹಣಕಾಸು ವ್ಯವಹಾರ ಇಲ್ಲದ ಸ್ಥಳಗಳಿಗೆ ನಿಯುಕ್ತಿಗೊಳಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1300 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎಂ.ಪಿ.ವರಖೇಡಿ, ತಹಶೀಲ್ದಾರ್, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** 1) ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಇವರ ಟಿಪ್ಪಣಿ ಸಂಖ್ಯೆ: ಆರ್‌ಡಿ 614 ಪಿಆರ್‌ಎಸ್ 06, ದಿನಾಂಕ: 06-09-2006.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ, ಮಾನ್ಯ ಮುಖ್ಯ ಮಂತ್ರಿಗಳು ದಿನಾಂಕ:06-09-2006 ರಂದು ಕೆ.ಆರ್. ನಗರ ತಾಲ್ಲೂಕಿನಲ್ಲಿ ಪ್ರವಾಸದಲ್ಲಿದ್ದಾಗ ಕೆ.ಆರ್. ನಗರ ತಹಶೀಲ್ದಾರರಾದ ಶ್ರೀ ಎಂ.ಪಿ. ವರಖೇಡಿ, ಇವರ ವರ್ತನೆ ಹಾಗೂ ಕಾರ್ಯ ವೈಖರಿಯ ಬಗ್ಗೆ ಸಾರ್ವಜನಿಕರಿಂದ ಅನೇಕ ದೂರುಗಳು ಬಂದಿರುತ್ತವೆ. ಆದಕಾರಣ ಸದರಿ ತಹಶೀಲ್ದಾರರನ್ನು ಇಲಾಖಾ ವಿಚಾರಣೆ ಬಾಕಿಯಿಟ್ಟು ಕೂಡಲೇ ಸೇವೆಯಿಂದ ಅಮಾನತ್ತು ಮಾಡಲು ಸೂಚಿಸಿರುತ್ತಾರೆಂದು ತಿಳಿಸಲಾಗಿದೆ. ಆದಕಾರಣ, ಸದರಿ ತಹಶೀಲ್ದಾರರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತು ಮಾಡಬೇಕಾಗಿ ರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ:ಆರ್‌ಡಿ 63 ಎಡಿಇ 2006, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(i)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಪಿ. ವರಖೇಡಿ, ತಹಶೀಲ್ದಾರ್, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು, ಇವರ ಅನುಮತಿಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1361 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀಮತಿ ಸೀತಾಲಕ್ಷ್ಮಮ್ಮ, ನಿಯೋಜನೆ ಮೇಲೆ ಹಿಂದಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಹಾಲಿ ವಿಶೇಷ ತಹಶೀಲ್ದಾರ್, ಮೈಸೂರು ನಗರಾಭಿವೃದ್ಧಿ ಅಧಿಕಾರಿ, ಮೈಸೂರು, ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ:** 1) ಅ.ಟಿ.ಸಂಖ್ಯೆ: ಸಕಇ 289 ಪಕಸೆ 04 ದಿನಾಂಕ: 05–05–2005.

2) ದಿನಾಂಕ:20–09–2005ರ ಕಾರಣ ಕೇಳುವ ನೋಟೀಸ್ ಸಂ.ಆರ್‌ಡಿ 41 ಎಡಿಇ 2005

3) ಶ್ರೀಮತಿ ಸೀತಾಲಕ್ಷ್ಮಮ್ಮರವರ ದಿನಾಂಕ:08-03-2006ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀಮತಿ ಸೀತಾಲಕ್ಷ್ಮಮ್ಮ ತಹಶೀಲ್ದಾರ್, ಹಾಲಿ ವಿಶೇಷ ತಹಶೀಲ್ದಾರ್, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಇವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ ಕೊಪ್ಪ ತಾಲ್ಲೂಕು ಕಛೇರಿ ಕೊಪ್ಪ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕೊಪ್ಪ ತಾಲ್ಲೂಕಿಗೆ ಸಮಾಜ ಕಲ್ಯಾಣ ಇಲಾಖೆಯಿಂದ ನಿಗಧಿಯಾದ ಕಾರ್ಯಕ್ರಮಗಳ ಪ್ರಗತಿ ಸಾಧಿಸುವಲ್ಲಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಂದ ಆಗಿಂದಾಗ್ಗೆ ಕೇಳಿದ ಮಾಹಿತಿಗಳನ್ನು ಕ್ಲುಪ್ತ ಕಾಲದೊಳಗೆ ಕಳುಹಿಸದೇಯಿರುವ ಕರ್ತವ್ಯಲೋಪಗಳಿಗಾಗಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಪುನ: ಸೇವೆಯಲ್ಲಿ ಪುನರ್ ಸ್ಥಾಪಿಸಿ, ಮಾತೃ ಇಲಾಖೆಯಾದ ಕಂದಾಯ ಇಲಾಖೆಗೆ ಕಳುಹಿಸಲಾಗಿದ್ದು, ಸದರಿ ಅಧಿಕಾರಿಯವರ ಕರ್ತವ್ಯ ಲೋಪದ ಬಗ್ಗೆ ಮೇಲೆ ಕ್ರ.ಸಂ.(1) ರಲ್ಲಿ ಓದಲಾದ ದಿನಾಂಕ:05-05-2005ರ ಅನಧಿಕೃತ ಟಿಪ್ಪಣಿಯೊಂದಿಗೆ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ1-4ರವರೆಗೆ) ಕಳುಹಿಸಿ ಶ್ರೀಮತಿ ಸೀತಾಲಕ್ಷ್ಮಮ್ಮರವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಸಮಾಜ ಕಲ್ಯಾಣ ಇಲಾಖೆಯು ಕೋರಿರುತ್ತದೆ.

ಸಮಾಜ ಕಲ್ಯಾಣ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀಮತಿ ಸೀತಾಲಕ್ಷ್ಮಮ್ಮ, ಅವರ ವಿರುದ್ಧ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವ ರೀತಿಯಲ್ಲಿ ಇರುವುದರಿಂದ ಆಪಾದಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಇವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ-1-4ರವರೆಗೆ) ಮೇಲೆ ಕ್ರ.ಸಂ.(2) ರಲ್ಲಿ ಓದಲಾದ ದಿನಾಂಕ:20-09-2005ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಅದಕ್ಕೆ ಅವರು ಉತ್ತರವಾಗಿ ದಿ:5-10-2005 ರಂದು ಸಲ್ಲಿಸಿರುವ ಮನವಿಯಲ್ಲಿ ಅನುಬಂಧ-3ರ ದಾಖಲಾತಿ ನೀಡಲು ಕೋರಿದ್ದರು. ಈ ಬಗ್ಗೆ ಸರ್ಕಾರವು ದಿ:01-03-2006ರ ಪತ್ರದಲ್ಲಿ ಅನುಬಂಧ-3ರ ದಾಖಲಾತಿಗಳ ಪ್ರತಿಗಳೆಲ್ಲವನ್ನು ಒದಗಿಸಲು ಸಾಧ್ಯವಾಗಿಲ್ಲವಾದ್ದರಿಂದ ಕಂದಾಯ ಇಲಾಖೆಗೆ ದಿ:8-3-06ರೊಳಗೆ ಖುದ್ದಾಗಿ ಬಂದು ಲಭ್ಯವಿರುವ

ದಾಖಲಾತಿಗಳನ್ನು ಪರಿಶೀಲಿಸಿ ಆ ಬಗ್ಗೆ ಅಗತ್ಯವಾದ ಟಿಪ್ಪಣಿ ತಯಾರಿಸುವಂತೆ ಸೂಚಿಸಲಾಗಿತ್ತು. ಅದರಂತೆ ದಿನಾಂಕ: 03-03-2006 ರಂದು ಕಛೇರಿಗೆ ಖುದ್ದಾಗಿ ಬಂದು ದಾಖಲಾತಿಗಳನ್ನು ಅವಗಾಹಿಸಿ, ಟಿಪ್ಪಣಿಯನ್ನು ತಯಾರಿಸಿಕೊಂಡಿರುತ್ತಾರೆ. ಶ್ರೀಮತಿ ಸೀತಾಲಕ್ಷ್ಮಮ್ಮ, ಇವರು ಮೇಲೆ ಕ್ರ.ಸಂ.(3)ರ ದಿನಾಂಕ: 8.3.2006 ರಲ್ಲಿ ಸಲ್ಲಿಸಿರುವ ಲಿಖಿತ ಉತ್ತರದಲ್ಲಿ ಅವರ ಮೇಲಿನ ಆರೋಪವನ್ನು ನಿರಾಕರಿಸಿ, ಅರೋಪಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀಮತಿ ಸೀತಾಲಕ್ಷ್ಮಮ್ಮರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ. ಮತ್ತು ಅವರು ಆರೋಪದ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದುದರಿಂದ ಅವರ ವಿರುದ್ಧ ಹೊರಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆನಡೆಸಲು ತೀರ್ಮಾನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 41 ಎಡಿಇ 2005, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಶ್ರೀಮತಿ ಸೀತಾಲಕ್ಷ್ಮಮ್ಮ, ಹಿಂದಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಕೊಪ್ಪ ತಾಲ್ಲೂಕು, ಚಿಕ್ಕಮಂಗಳೂರು ಜಿಲ್ಲೆ ಹಾಲಿ ವಿಶೇಷ ತಹಶೀಲ್ದಾರ್, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರು, ನಂ.239/1 ನಾಗಶ್ರೀ, 4ನೇಮುಖ್ಯರಸ್ತೆ, ಚಾಮರಾಜಪೇಟೆ,ಬೆಂಗಳೂರು-560018,ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಯ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ, ನಿಗದಿಪಡಿಸಿದ ಸ್ಥಳದಲ್ಲಿ ವಿಚಾರಣೆ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು, ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇವಿ 05, ದಿನಾಂಕ:23-08-2005ರನ್ವಯ ವಿಚಾರಣಾ ಅಧಿಕಾರಿಗಳಿಗೆ ರೂ.6,000/-(ಆರು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04-03-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ ಅಲೋಯೆನ್ಸ್‌ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಚಿಕ್ಕಮಗಳೂರು ಜಿಲ್ಲಾಧಿಕಾರಿಗಳು, ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11- ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ, ವಿಚಾರಣಾ ವರದಿಯನ್ನು 02 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 1383

**ವಿಷಯ:** ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್, 1999ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ ತಹಶೀಲ್ದಾರ್‌ರವರು ನೀಡಿರುವ ರಾಜೀನಾಮೆಯನ್ನು ಹಿಂದಕ್ಕೆ ಪಡೆಯಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:**
1) ದಿನಾಂಕ: 25-01-2006ರ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005.
2) ಅ.ಜ್ಞಾ.ಸಂ.ಕಂಇ 241 ಎಎಸ್‌ಡಿ 2005, ದಿ:30-01-2006
3) ಶ್ರೀ ಮುರ್ಶದುದ್ದೀನ್ ಎಲ್. ಕಿಲ್ಲೇದಾರ್‌ರವರು ಕರ್ತವ್ಯಕ್ಕೆ ಹಾಜರಾಗಿರುವ ಬಗ್ಗೆ ಸಲ್ಲಿಸಿರುವ ದಿನಾಂಕ: 31-01-2006ರ ಮನವಿ
4) ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್‌ರವರ ದಿ:13.2-2006ರ ಮನವಿ
5) ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್‌ರವರ ದಿ:10-06-2006ರ ಮನವಿ.

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ)ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ 1999ನೇ ಸಾಲಿನ 78 ಅಭ್ಯರ್ಥಿಗಳನ್ನು ಕ್ರ.ಸಂ.1ರ ದಿನಾಂಕ:25-01-2006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್-ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿದೆ. ದಿನಾಂಕ:25-1-2006ರ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ.59) ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್, ರವರ ಉಲ್ಲೇಖ (3)ರ ಮನವಿಯಂತೆ ದಿನಾಂಕ:31-1-2006 ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ.

ಉಲ್ಲೇಖ (2)ರ ಅಧಿಕೃತ ಜ್ಞಾಪನದಲ್ಲಿ ಪರೀಕ್ಷಾರ್ಥ ತಹಶೀಲ್ದಾರರರುಗಳಿಗೆ ದಿನಾಂಕ:31-01-2006 ರಿಂದ 26-05-2006ರವರೆಗೆ ತಾತ್ಕಾಲಿಕ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ಅದರನ್ವಯ ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್, ರವರು ಸದರಿ ತರಬೇತಿ ಕಾರ್ಯಕ್ರಮದಲ್ಲಿ ಹಾಜರಾಗಿರುತ್ತಾರೆ. ಉಲ್ಲೇಖ(4)ರ ಮನವಿಯಲ್ಲಿ ತನ್ನ ಸ್ವಇಚ್ಛೆಯಿಂದ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ರಾಜೀನಾಮೆ ನೀಡಿ ದಿ:13-02-2006 ರಂದು ಕಛೇರಿ ವೇಳೆಗೆ ಮುಂಚಿತವಾಗಿ ಸದರಿ ಹುದ್ದೆಯಿಂದ ಬಿಡುಗಡೆಗೊಳಿಸಲು ಕೋರಿರುತ್ತಾರೆ.

ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್, ರವರು ದಿನಾಂಕ:13-02-2006 ರಂದು ಗ್ರೂಪ್-ಬಿ ಪರೀಕ್ಷಾರ್ಥಿ ತಹಶೀಲ್ದಾರ್ ಹುದ್ದೆಗೆ ಸಲ್ಲಿಸಿದ ರಾಜೀನಾಮೆಯನ್ನು ಅಂಗೀಕರಿಸುವ ವಿಷಯವು ಸರ್ಕಾರದ ಪರಿಶೀಲನೆಯಲ್ಲಿರುವಾಗ ಉಲ್ಲೇಖ (5) ರಂತೆ

ದಿನಾಂಕ:10-06-2006 ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ತಾನು ಮೈಸೂರಿನಲ್ಲಿ ತರಬೇತಿಯಲ್ಲಿರುವಾಗ ಅನುಮತಿ ಪಡೆದು ತಮ್ಮ ಊರಾದ ದಾರವಾಡದ ಮನೆಗೆ ಬಂದಾಗ ಮನೆಯಲ್ಲಿ ದರೋಡೆಯಿಂದ ಅವರ ಹೆಂಡತಿಯು ಮಾನಸಿಕ ಅಸ್ವಸ್ಥಳಾಗಿ ದ್ದಾಳೆಂದು, ಅಲ್ಲದೆ ಅವರು ಸಹ ಮೂಳೆರೋಗದಿಂದ ಬಳಲುತ್ತಿದ್ದರೆಂದೂ, ಈ ಎಲ್ಲಾ ಕಾರಣದಿಂದ ದಿನಾಂಕ: 13-02-2006 ರಂದು ಹುದ್ದೆಗೆ ರಾಜೀನಾಮೆ ನೀಡಿದ್ದಾಗಿ, ಈಗ ವೈದ್ಯರು ಕರ್ತವ್ಯಕ್ಕೆ ಹಾಜರಾಗಲು ಸಮರ್ಥರಿರುವುದಾಗಿ ತಿಳಿಸಿರುತ್ತಾರೆಂದು, ತಾನು ಆತುರದ ನಿರ್ಧಾರದಿಂದ ಹುದ್ದೆಗೆ ದಿನಾಂಕ: 13-02-2006 ರಂದು ರಾಜೀನಾಮೆ ಸಲ್ಲಿಸಿದ್ದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು ಹಾಗೂ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 26 ಎಸ್‌ಡಿಇ 86, ದಿನಾಂಕ:03-04-1990ರ ಮಾರ್ಗಸೂಚಿಯನ್ವಯ ತನ್ನ ಮನವಿಯನ್ನು ಪರಿಗಣಿಸಿ, ಮಾನವೀಯತೆಯಿಂದ ಪುನ: ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲು ಕೋರಿರುತ್ತಾರೆ.

ಸದರಿ ಪರಿವೀಕ್ಷಣಾ ತಹಶೀಲ್ದಾರರ ರಾಜೀನಾಮೆಯು ಪರಿಶೀಲನೆಯಲ್ಲಿರುವಾಗಲೇ ವಾಪಸ್ಸು ಪಡೆದಿರುವುದರಿಂದ ಸರ್ಕಾರದ ಅಧಿಕೃತ ಜ್ಞಾಪನ ಸಂ.ಸಿಆಸುಇ 20 ಎಸ್‌ಡಿಇ 86, ದಿನಾಂಕ:03-04-1990 ರಲ್ಲಿರುವ ಅವಕಾಶದಂತೆ ಶ್ರೀಯುತರ ರಾಜೀನಾಮೆಯನ್ನು ಹಿಂಪಡೆಯಲು ಅನುಮತಿಸಿ ಪುನ: ಸದರಿಯವರನ್ನು ಪರಿವೀಕ್ಷಣಾ ತಹಶೀಲ್ದಾರರಾಗಿ ಮುಂದುವರೆಸಲು ನಿರ್ಧರಿಸಲಾಗಿದೆ. ಸದರಿಯವರು ತರಬೇತಿಗೆ ಹಾಜರಾಗದ ದಿನಾಂಕದಿಂದ ಪುನ: ತರಬೇತಿಗೆ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು `Dies non` ಎಂದು ಪರಿಗಣಿಸಬೇಕಾಗುತ್ತದೆ. ಅಲ್ಲದೆ ಈ ಅಧಿಕಾರಿಗಳು ತಮ್ಮ ಸೇವಾವಧಿಯಲ್ಲಿ ಭಂಗವಾಗಿರುವ ದಿನಗಳಷ್ಟು ಇವರ ಪರಿವೀಕ್ಷಣಾವಧಿ ಮುಂದಕ್ಕೆ ಹಾಕಬೇಕಾಗುತ್ತದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಆರ್‌ಡಿ 206 ಎಎಸ್‌ಡಿ 2006, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಮುರ್ಶದುದ್ದೀನ್ ಎಲ್.ಕಿಲ್ಲೇದಾರ್, ಪರಿವೀಕ್ಷಣಾ ತಹಶೀಲ್ದಾರ್, ಇವರು ದಿನಾಂಕ 13-2-2006ರಂದು ಗುಂಪು- ಬಿ ಪರಿವೀಕ್ಷಣಾ ತಹಶೀಲ್ದಾರ್ ಹುದ್ದೆಗೆ ನೀಡಿದ ರಾಜೀನಾಮೆಯನ್ನು ಹಿಂಪಡೆಯಲು ಸರ್ಕಾರದ ಅನುಮತಿ ನೀಡಲಾಗಿದೆ. ಹಾಗೂ ಇವರನ್ನು ಪರಿವೀಕ್ಷಣಾ ತಹಶೀಲ್ದಾರ್‌ರಾಗಿ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಸದರಿಯವರನ್ನು ಬೆಳಗಾಂ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಜಿಲ್ಲಾಮಟ್ಟದ ತರಬೇತಿಗಾಗಿ ನಿಯೋಜಿಸಲಾಗಿದೆ.

1) ಈ ಅಧಿಕಾರಿಗಳು ತರಬೇತಿಗೆ ಹಾಜರಾಗದ ದಿನಾಂಕದಿಂದ ಪುನ: ಬೆಳಗಾಂ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ತರಬೇತಿಗೆ ಹಾಜರಾಗುವವರೆಗಿನ ದಿನಗಳನ್ನು `Dies non`ಎಂದು ಪರಿಗಣಿಸಲ್ಪಡುತ್ತದೆ.
2) ಈ ಅಧಿಕಾರಿಗಳು ತಮ್ಮ ಪರಿವೀಕ್ಷಣಾವಧಿಯಲ್ಲಿ ಭಂಗವಾಗಿರುವ ದಿನಗಳಷ್ಟುಮಟ್ಟಿಗೆಇವರ ಪರಿವೀಕ್ಷಣಾವಧಿಯನ್ನು ಮುಂದೂಡಲ್ಪಡುತ್ತದೆ.
3) ಈ ಅಧಿಕಾರಿಗಳು ಪರಿವೀಕ್ಷಣಾ ತಹಶೀಲ್ದಾರರಿಗೆ ನಿಗದಿಪಡಿಸಿರುವ ಎಲ್ಲಾತರಬೇತಿಗಳನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು. ಹಾಗೂ ATIನಲ್ಲಿ ಪೂರೈಸಬೇಕಿರುವ ತರಬೇತಿಗಳನ್ನು ATI ಷೆಡ್ಯೂಲ್ ಮಾಡುವ ತರಬೇತಿ ದಿನಾಂಕಗಳಿಗನುಗುಣವಾಗಿ ತರಬೇತಿಯನ್ನು ಪಡೆಯತಕ್ಕದ್ದು. ಇಲ್ಲದಿದ್ದಲ್ಲಿ ಪರಿವೀಕ್ಷಣಾ ಅವಧಿಯು ಮುಂದೂಡಲ್ಪಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ್**
ಪಿ.ಆರ್. 1385 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## FINANCE SECRETARIAT

**Subject:** Cases in which assent of Finance Department may be presumed to have been given.
**Read:** 1) G.O. No. FD 01 TFP 96, dated: 10.7.1996.
2) G.O. No. FD 12 TFP 2000, dated: 15.11.2000.
3) G.O. No. FD 01 TFP 2003, dated: 12.06.2003.

**PREAMBLE:**

In the Government Order read at (3) above Powers have been delegated to the Secretaries of the Administrative Departments for sanction of expenditure up to Rs.50.00 lakhs in each case subject to availability of budget provision and further subject to maximum of Rs.300.00 lakhs per month by modifying item No.39 of Government Order No. FD 12 TFP 2000 dated: 15.11.2000. However in the K.D.P. meeting held on 30.06.2006 a decision has been taken for enhancement of the existing powers delegated to them to 100.00 lakhs in each case subject to the maximum of Rs.500.00 lakhs per month and hence the following order.

**GOVERNMENT ORDER No. FD 21 TFP 2006, Bangalore, Dated: 2nd September 2006**

In the circumstances explained above, Government are pleased to direct that limits prescribed for item No.39 in Government Order No. FD 1 TFP 2003 dated: 12.06.2003 shall be enhanced as follows, with immediate effect.

Sanction of Expenditure (except loan and capital) up to Rs.100.00 lakhs in each case subject to availability of budget provision and further subject to maximum of Rs.500.00 lakhs per month. Such expenditure sanction may also be given in case of local bodies Institutions where ever Government approval is necessary as per Law (This power does not cover 'New Scheme', items of 'New Service', and purchase vehicles).

By Order and in the name of the Governor of Karnataka,
**C. SHAMARAO**
P.R. 1369 Under Secretary to Government, (FR & BCC) Finance Department.

**ಆರ್ಥಿಕ ಸಚಿವಾಲಯ**

**ವಿಷಯ:-** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:-** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 15 ಎಸ್‌ಆರ್‌ಪಿ 2006, ದಿನಾಂಕ: 27ನೇ ಏಪ್ರಿಲ್ 2006.

**ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2006.**

1. ಸರ್ಕಾರವು ದಿನಾಂಕ 1-7-2006 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.74 ರಿಂದ ಶೇ.79 ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ನಗದಾಗಿ ಮರು ಆದೇಶ ಹೊರಡಿಸುವವರೆಗೆ ಪಾವತಿ ಮಾಡಲಾಗುವುದು.

3. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ. ಈ ಆದೇಶವು ಎಫ್‌ಎಸ್‌ಜೆಪಿಸಿ ವೇತನ ಶ್ರೇಣಿಗಳಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಮತ್ತು ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಯಲ್ಲಿರುವ ಬೋಧಕ ಸಿಬ್ಬಂದಿ, ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿಗೂ ಅನ್ವಯಿಸುತ್ತದೆ.

4. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ,

   (ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

   (ಆ) 1999ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ, ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ ಸೇರುತ್ತವೆ.

5. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

6. ಪೂರ್ವ ಪರಿಷ್ಕೃತ ಯು.ಜಿ.ಸಿ., ಎ.ಐ.ಸಿ.ಟಿ.ಇ. ಮತ್ತು ಐ.ಸಿ.ಎ.ಆರ್. ವೇತನ ಶ್ರೇಣಿಗಳಲ್ಲಿ ಮುಂದುವರಿಯುತ್ತಿರುವ ಬೋಧಕ ಸಿಬ್ಬಂದಿ, ದೈಹಿಕ ಶಿಕ್ಷಣ ಸಿಬ್ಬಂದಿ ಹಾಗೂ ಗ್ರಂಥಪಾಲಕರ ಪ್ರಕರಣಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 96 ದಿನಾಂಕ 8-5-1996 ರಲ್ಲಿ ದಿನಾಂಕ 1-1-1996ರ ವರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯು ಸಹ ಮೂಲ ವೇತನದಲ್ಲಿ ಸೇರುತ್ತದೆ.

7. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

8. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಭಿನ್ನ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎನ್.ಟಿ.ನಾಯ್ಕ್**
ಸರ್ಕಾರದ ಉಪಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2).

**FINANCE SECRETARIAT**

**Sub:-** Dearness Allowance – Revision of rates.

**READ:-** G.O.No. FD 15 SRP 2006, DATED: 27th April 2006

**ORDER NO. FD 25 SRP 2006, BANGALORE, DATED:22nd September 2006.**

Government are pleased to sanction increase in the rates of Dearness Allowance from existing 74% to 79% of the basic pay to the State Government employees with effect from 1st July 2006.

2. The increase in Dearness Allowance admissible under this order is payable in cash until further orders.

3. These orders will apply to the full time Government employees, employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay. These orders will also apply to the Judicial Officers who are on FNJPC scales of pay and to the Teaching Staff, Librarians and Physical Education Personnel who are on UGC/AICTE/ICAR scales of pay.

4. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes: -

(a) Stagnation increment, if any, granted to him above the maximum of the scale of pay.

(b) Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

5. Basic Pay shall not include any emoluments other than those specified above.

6. In respect of Teachers, Librarians, Physical Education Personnel who are still continuing in the pre-revised UGC, AICTE and ICAR scales of pay, basic pay includes Dearness Allowance sanctioned up to 1.1.1996 vide G.O. No. FD 8 SRP 96 dated 8.5.1996.'

7. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

8. The Dearness Allowance will be shown as a distinct element of remuneration and will not be treated as pay for any purpose.

BY ORDER AND IN THE NAME OF THE
GOVERNOR OF KARNATAKA
**N.T.NAIK**
Deputy Secretary to Government,
Finance Department (Services-2)

P.R. 1416

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**Subject:** Project proposal of M/s Cessna Garden Developers Private Ltd., for establishment of ***"Sector Specific IT/ITES-SEZ"*** at Bangalore – Approval for – Orders reg.

**Read:** Proceedings of the 6th State High Level Clearance Committee (SHLCC) meeting held on 24.03.2006.

**PREAMBLE:**

M/s.Cessna Garden Developers Private Ltd., is a limited company incorporated under Indian Companies Act. The company is engaged in construction of residential, commercial buildings, shops, offices & other allied structures. The income of its group company i.e., M/s. Prestige Estate Projects Pvt. Ltd., for the year ended 31st March 2005 is Rs 358 crores. The company proposes to establish a **"Sector Specific IT/ITES-SEZ;** with an investment of Rs.506 Crores in 47.50 acres of their own land in Kadubeesanahalli village, Varthur hobli, Bangalore East taluk. The land is converted for non-agricultural commercial use by the Revenue Department. The project proposes to provide employment to about 75000 persons.

In the proposal submitted for the 6th State High Level Clearance Committee (SHLCC) meeting held on 24.03.2006, the Company had requested various Infrastructure facilities and the incentives and concessions as envisaged in the Millennium Information Technology Policy from the Government. The State High Level Clearance Committee after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings read above.

Government have examined the recommendations of the State High Level Clearance Committee. Hence the following order.

GOVERNMENT ORDER NO: ITD 15 MDA 2006 (1), BANGALORE

DATED: 20th September 2006.

In the circumstances explained in the Preamble, Government is pleased to accord approval to **M/s Cessna Garden Developers Private Ltd.**, to establish **a "Sector Specific IT/ITES-SEZ** in 47.50 acres of their own land in Kadubeesanahalli village, Varthur hobli, Bangalore East taluk with the following facilities and incentives and concessions.

**INFRASTRUCTURE FACILITIES:**

**LAND:**

Approval to establish "Sector specific (IT/ITES) SEZ" in 47.5 acres of land at Sy.Nos. 3/2B, 4, 5, 5/3, 6, 7, 8/1, 8/2, 10/1A, 10/1B, 10/2, 10/3, 11, 12/2, 12/3, 12/4, 13/2, 17/1, 17/2, 17/3, 17/4, 38/2, 43 & 44 in Kadubeesanahalli village, Varthur Hobli, Bangalore East Taluk. BDA shall approve the layout Plan.

**WATER:**

Bangalore Water Supply & Sewerage Board, Bangalore to consider supply of 6.25 lakh litres per day.

**POWER:**

Bangalore Electricity Supply Company, Bangalore to consider supply of 55000 KVA power.

**Approval of SEZ Status:**

To recommend to Govt. of India for grant of SEZ Status.

**INCENTIVES & CONCESSIONS:**

Incentives and Concessions as per the State SEZ Policy 2002 shall be extended to the Company

**Environment & Pollution Control Clearances:**

The company shall apply for and obtain pollution & environmental clearances from Karnataka State Pollution Control Board and the Ministry of Environment and Forests, Government of India, New Delhi as per the provisions of the Acts and Rules governing environmental protection.

**Providing Local Employment:**

The Company shall provide employment to local persons in terms of prevailing policy of Government.

By Order and in the name of the
Governor of Karnataka
**T.B.Renukaprasad**
Under Secretary to Government
Information Technology, Biotechnology
and Science & Technology Dept.

**Subject:** Project proposal of **M/s. Dynasty Developers Pvt. Ltd.**, for establishment of **a Park for IT/ITES** activities at Bangalore – Approval for –Orders reg.

**Read:** Proceedings of the 6th State High Level Clearance Committee (SHLCC) meeting held on 24.03.2006.

**PREAMBLE:**

M/s.Dynasty Developers Pvt. Ltd., is a Private Limited Company incorporated under Companies Act 1956 in Karnataka and amended in 2002. It is apart of Embassy group engaged in the activities of property development, construction of commercial complexes, information technology parks, trade and convention centers with in-built residential complex etc.

The Company propose to set up a Park for IT/ITES activities in 14 acres 4.8 guntas of land in Sy.No.10/1A, 10/1B, 10/2, 10/3, 11, 12/1, 12/2, 12/3, 13/2, 17/2 & 17/3 of Kadubeesanahalli, Varthur Hobli, Bangalore South Taluk with an total investment of Rs. 450 Crores. The subject land was purchased by the promoters form M/s. Cessna Garden Developers Limited and is converted for non-agricultural commercial use by the Revenue Department after approval of Urban Development Department for change of land use vide Govt. Order No.UDD/522/BAS/04 dated 07.03.2005. Bangalore Development Authority has already approved change of land use for commercial (software park) use vide endorsement NO. BDA/NUS/CLU/66/04-05/1874/2005-06 dated 19.08.2005. The company has clarified that the above land does not form part of the land being developed by M/s. Cessna Garden Developers Private Limited as SEZ. The project, upon implementation, would provide employment to about 18,000 persons.

In the proposal submitted before the 6th State High Level Clearance Committee (SHLCC) meeting held on 24.03.2006, the Company had requested various Infrastructure facilities and the incentives and concessions and concessions as envisaged in the Millennium Information Technology Policy from the Government. The State High Level Clearance Committee after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings read above.

Government have examined the recommendations of the State High Level Clearance Committee in its 6th Meeting held on 24.03.2006 in all its aspects. Hence the following order:

**GOVERNMENT ORDER NO: ITD 15 MDA 2006 (2), BANGALORE,**

**DATED: 20th September 2006.**

In the circumstances explained in the preamble, Government is pleased to accord approval to the project proposal of M/s. Dynasty Developers Private Limited for establishment of a park for IT / ITES activities in 14 acres 4.8 guntas of land in f Kadubeesanahalli, Varthur Hobli, Bangalore South Taluk with a total investment of Rs. 450 Crores with the following facilities and incentives.

**INFRASTRUCTURE FACILITIES:**

**LAND:**

Approval to establish an "IT/ITES Park" in 14 acres 4.8 guntas of land in Sy. No. 10/1A, 10/1B, 10/2, 10/3, 11, 12/1, 12/2, 12/3, 13/2, 17/2 & 17/3 of Kadubeesanahalli, Varthur Hobli, Bangalore South Taluk. The Bangalore Development Authority shall approve the layout Plan.

**Power:**

Bangalore Electricity Supply Company, Bangalore to consider supply of14,000 KVA power.

**WATER :**

Bangalore Water Supply & Sewerage Board to consider supply of 328 million litres of water per day.

**INCENTIVES & CONCESSIONS :**

Incentives and Concessions as per the SEZ Policy shall be extended to the Company

**Environment & Pollution Control Clearances:**

The company shall apply for and obtain pollution & environmental clearances from Karnataka State Pollution Control Board and the Ministry of Environment and Forests, Government of India, New Delhi as per the provisions of the Acts and Rules governing environmental protection.

**Providing Local Employment:**

The Company shall provide employment to local persons in terms of prevailing policy of Government.

By Order and in the name of the
Governor of Karnataka
**T.B.Renukaprasad**
Under Secretary to Government
Information Technology, Biotechnology
and Science & Technology Dept.

**Subject:** Project proposal of **M/s. Shapoorji Pallonji & Company Ltd.**, for setting up of sector specific **IT/ITES Park at Mysore** - Approval for - Orders reg.

**Read:** Proceedings of the 6th State High Level Clearance Committee (SHLCC) meeting held on 24.03.2006

**PREAMBLE:**

M/s. Shapoorji Pallonji & Company Ltd., is a private limited company incorporated under Companies Act. The Company has executed projects in India and abroad – from industrial structures, commercial and residential buildings, hotels and hospitals. The total turnover of the company for the year 2003-04 is Rs. 556 Crores.

The company proposes to establish an IT campus with a total investment of Rs.1132 Crores by providing 6.13 lakh sq.mts area for IT workspace, 3.06 lakh sq.mts each for commercial and residential purposes. The Company has identified 150 acres of land in Magarahalli and Anagally village in Srirangapatna Taluk of Mysore district for proposed acquisition by KIADB under *"Single Unit Complex"*. The Project proposes to provide employment to about 99000 persons.

In the proposal submitted for the 6th State High Level Clearance Committee (SHLCC) meeting held on 24.03.2006, the Company had requested various Infrastructure facilities and the incentives and concessions as envisaged in the Millennium Information Technology Policy from the Government. The State High Level Clearance Committee after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings read above.

Government have examined the recommendations of the State High Level Clearance Committee in its 6th Meeting held on 24.03.2006 in all its aspects. Hence the following order:

**GOVERNMENT ORDER NO: ITD 15 MDA 2006 (3), BANGALORE,**
**DATED: 20th September 2006.**

In the circumstances explained in the preamble, Government is pleased to accord approval to the project proposal of M/s. Shapoorji Pallonji & Company Ltd., to establish an IT campus at Mysore with a total investment of Rs. 1132 Crores with the following facilities and incentives.

**INFRASTRUCTURE FACILITIES:**

**LAND:**

Karnataka Industrial Area Development Board (KIADB) shall acquire and allot 150 acres in Magarahalli and Anagally village Srirangapatna tq. of Mysore as "Single Unit Complex" as approved by Land Audit Committee.

**Power:**

Chamundeswari Electricity Supply Company (CESCOM) shall consider supply of 218000 KVA power.

**WATER :**

Karnataka Industrial Area Development Board to consider supply of 80,00,000 litres of water per day.

**Approval of SEZ Status:**

To recommend to Govt. of India for grant of SEZ Status

**INCENTIVES & CONCESSIONS :**

Incentives and Concessions as per the SEZ Policy 2006 shall be extended to the Company

**Environment & Pollution Control Clearances:**

The company shall apply for and obtain pollution & environmental clearances from Karnataka State Pollution Control Board and the Ministry of Environment and Forests, Government of India, New Delhi as per the provisions of the Acts and Rules governing environmental protection.

**Providing Local Employment:**

The Company shall provide employment to local persons in terms of prevailing policy of Government.

By Order and in the name of the
Governor of Karnataka
**T.B.Renukaprasad**
Under Secretary to Government
Information Technology, Biotechnology
and Science & Technology Dept.

**Subject:** Project proposal of **M/s. Tanglin Developments Ltd.**, to establish an **"IT/ITES-SEZ" in** Kengeri hobli, Bangalore Urban District -- Approval for -- Orders reg.

**Read:** Proceedings of the 6th State High Level Clearance Committee (SHLCC) meeting held on 24.03.2006

**PREAMBLE:**

M/s. Tanglin Developments Ltd., is a limited company incorporated under Companies Act. It is a part of Global Technology Ventures Ltd., engaged in the development of infrastructural facilities for IT & ITES sector and development of software solutions. The other companies of M/s. Global Technology Ventures Ltd., are – Mind tree consulting, ITTIAM systems, Global Edge software, Liquid crystal, Net magic, Magna soft, way 2 wealth. The Group turnover is around Rs.500 crores per annum.

The company proposes to establish **"IT/ITES SEZ – IT campus – Office space and support infrastructure – STP"**, with an investment of Rs.562 Crores in their own land of 67 acres located in

different Sy.No. of Pattanagere, Mylasandra villages, Kengeri Hobli, Bangalore South. The company proposes to utilize 54.5 acres of land for IT & ITES services and balance 12.5 acres for residential purpose. The Bangalore Development Authority has accorded the change of land use from residential to industrial use (for Software Technology Park) to an extent of 59 acres 24 guntas vide letter No. BDA/TPS/51/2000-01 dated 17.04.2000.The project proposes to provide employment to about 40000 persons.

In the proposal submitted for the 6th State High Level Clearance Committee (SHLCC) meeting held on 24.03.2006, the Company had requested various Infrastructure facilities and the incentives and concessions as envisaged in the Millennium Information Technology Policy from the Government. The State High Level Clearance Committee after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings read above.

Government have examined the recommendations made by the State High Level Clearance Committee in all its aspects. Hence the following order:

**GOVERNMENT ORDER NO: ITD 15 MDA 2006 (4), BANGALORE,**
**DATED: 20th September 2006.**

In the circumstances explained in the Preamble, Government is pleased to accord approval to M/s. Tanglin Developments Ltd to establish **"IT/ITES SEZ – IT campus – Office space and support infrastructure – STP"** in their own land of 67 acres in different Sy.Nos. of Pattanagere, Mylasandra villages, Kengeri Hobli, Bangalore South with the investment of 562 Crores with the following facilities and incentives.

**INFRASTRUCTURE FACILITIES:**

**LAND:**

Approval of the Government is accorded to establish "IT/ITES SEZ" in their own land of 67 acres in Sy.Nos. (annexure) of Pattanagere / Mylasandra villages, Kengeri Hobli, Bangalore Urban District. The Bangalore Development Authority shall approve the layout Plan.

**Power:**

Bangalore Electricity Supply Company to consider supply of 64680 KVA power.

**WATER :**

Bangalore Water Supply & Sewerage Board to consider supply of 30,00,000 liters of water per day.

**Approval of SEZ Status:**

To recommend to Govt. of India for grant of SEZ Status.

**INCENTIVES & CONCESSIONS :**

Incentives and Concessions as per the SEZ Policy shall be extended to the Company.

**Environment & Pollution Control Clearances:**

The company shall apply for and obtain pollution & environmental clearances from Karnataka State Pollution Control Board and the Ministry of Environment and Forests, Government of India, New Delhi as per the provisions of the Acts and Rules governing environmental protection.

**Providing Local Employment:**

The Company shall provide employment to local persons in terms of prevailing policy of Government.

By Order and in the name of the
Governor of Karnataka
**T.B.Renukaprasad**
Under Secretary to Government
Information Technology, Biotechnology
and Science & Technology Dept.

**Subject:** Project proposal of **M/s. Wipro Ltd.**, to establish **IT & ITES R & D Centre** at Hebbal Industrial Area, Mysore – Approval for – - Orders reg.

**Read:** Proceedings of the 6th State High Level Clearance Committee (SHLCC) meeting held on 24.03.2006

PREAMBLE:

M/s. Wipro Ltd is a public Limited Company incorporated under the Companies Act. The company was founded in the year 1945 and engaged in diversified activities in the field of consumer care, lighting.

engineering and health care products. In the year 1980, the company further diversified its activities to Information Technology.. Company has achieved a turnover of US$1Billion for the year 2003-04 and US$1.6 Billion for the year 2004-05. M/s Wipro Ltd., is a part of Wipro Corporation and its global technology services division is listed in New York Stock Exchange (WIT). The Company has 27 overseas offices world wide with about 45,000 IT personnel.

The Company is proposed to establish R & D Centre for the development of software and the specific areas of communications – using speech, data images and video (multimedia) in 100 acres of land in West of KRS road, beyond Hebbal Industrial Area, Mysore (Moogenahalli and Anegally villages in Srirangapatna taluk) with an investment of Rs80.00 Crores. The company wants to create world class infrastructure to cater to the business needs of its client companies. The project proposes to provide employment to about 12000 persons.

In the proposal submitted before the 6th State High Level Clearance Committee (SHLCC) meeting held on 24.03.2006, the Company had requested various Infrastructure facilities and the incentives and concessions as envisaged in the Millennium Information Technology Policy from the Government. The State High Level Clearance Committee, after detailed discussion of the project proposal of the said Company has recommended certain infrastructure facilities, incentives and concessions to the project, as detailed in the proceedings read above.

Government have examined the recommendations of the State High Level Clearance Committee in its 6th meeting held on 24.03.2006 in all its aspects. Hence the following order:

**GOVERNMENT ORDER NO: ITD 15 MDA 2006 (5), BANGALORE,**

**DATED: 20th September 2006.**

In the circumstances explained in the Preamble, Government is pleased to accord approval to M/s.Wipro Ltd to establish IT & ITES R & D Centre for the development of software and the specific areas of communications – using speech, data, images and video (multimedia) in 100 acres of land in West of KRS road, beyond Hebbal Industrial Area, Mysore (Moogenahalli and Anegally villages in Srirangapatna taluk) with an investment of Rs. 80.00 Crores with the following facilities and incentives.

**INFRASTRUCTURE FACILITIES:**

**LAND:**

Karnataka Industrial Area Development Board to acquire on consent basis and to allot 100 acres of land at West of KRS road, Beyond Hebbal Industrial area, Mysore (Moogenahalli and Angally Villlages in Srirangapatna tq.) as Single Unit Complex subject to assessment of land extent by Land Audit Committee.

**Power:**

Chamundeswari Electricity Supply Company to consider supply of 2000 KVA power.

**WATER :**

Karnataka Industrial Area Development Board to make available 12.50 lakhs litres of water per day.

**INCENTIVES & CONCESSIONS :**

Incentives and Concessions as per the Millennium IT Policy shall be extended to the Company.

**Environment & Pollution Control Clearances:**

The company shall apply for and obtain pollution & environmental clearances from Karnataka State Pollution Control Board and the Ministry of Environment and Forests, Government of India, New Delhi as per the provisions of the Acts and Rules governing environmental protection.

**Providing Local Employment:**

The Company shall provide employment to local persons in terms of prevailing policy of Government.

By Order and in the name of the
Governor of Karnataka
**T.B.Renukaprasad**
Under Secretary to Government
Information Technology, Biotechnology
and Science & Technology Dept.

P.R. 1396

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಂಗಳೂರು ನಗರಕ್ಕೆ ನೋಟರಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಲಾ 209 ಎಲ್‌ಸಿಎಲ್: 05, ದಿನಾಂಕ 24.12.2005

2) ಸರ್ಕಾರಿ ಪತ್ರ ಸಂಖ್ಯೆ ಲಾ 209 ಎಲ್‌ಸಿಎಲ್ 05, ದಿನಾಂಕ 31.12.2005

3) ಪತ್ರ ಸಂಖ್ಯೆ ಪಿಪಿಎಸ್ (ಸಿಸಿಸಿ) : 23 : 2006 ದಿನಾಂಕ 17.04.2006.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರಕ್ಕೆ ಐದು ಹೆಚ್ಚುವರಿಯಾಗಿ ನೋಟರಿ ಹುದ್ದೆಗಳನ್ನು ಸೃಜಿಸಲಾಗಿತ್ತು. ಈ ಹುದ್ದೆಗಳನ್ನು ತುಂಬುವ ಸಲುವಾಗಿ ನಿಯಮಗಳನ್ವಯ ಕ್ರಮ ಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು(ನಗರ) ಇವರನ್ನು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 83 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯಾ ಈ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು ನಗರಕ್ಕೆ ನೋಟರಿಗಳನ್ನಾಗಿ ನೇಮಿಸಿದೆ.

* ಶ್ರೀ ಪುಟ್ಟರಾಮಯ್ಯ,
  ವಕೀಲರು, ನಂ. 657, ಬೈರವೇಶ್ವರನಗರ, ಸುಂಕದಕಟ್ಟೆ, ಮಾಗಡಿ ಮೈನ್ ರಸ್ತೆ, ಬೆಂಗಳೂರು.
* ಶ್ರೀ ಎನ್.ಕೆ. ಲಕ್ಷ್ಮಣ,
  ವಕೀಲರು, ನಂ. 111, 1ನೇ ಹಂತ, 1ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ, ಬೆಂಗಳೂರು.
* ಶ್ರೀ ಹೆಚ್.ಸಿ. ತಮ್ಮಣ್ಣಗೌಡ,
  ವಕೀಲರು, ನಂ. 5, 2ನೇ ಸರ್ಕ್ಯುಲರ್ ರಸ್ತೆ, ಎಫ್‌ಟಿಐ ಕಾಲೋನಿ, ನಂದಿನಿ ಲೇಔಟ್, ಬೆಂಗಳೂರು
* ಶ್ರೀ ಟಿ.ವಿ. ಚಂದ್ರಶೇಖರ ರೆಡ್ಡಿ,
  ವಕೀಲರು, ನಂ. 776, ಚಾಮುಂಡಿನಗರ ಮುಖ್ಯರಸ್ತೆ, ಚೋಳನಾಯಕನಹಳ್ಳಿ, ಆರ್.ಟಿ. ನಗರ, ಬೆಂಗಳೂರು.

ಸದರಿ ವಕೀಲರು ನಿಗದಿತ ಮೊತ್ತದ ಶುಲ್ಕವನ್ನು (ರೂ. 1000.00) ಲೆಕ್ಕ ಶೀರ್ಷಿಕೆ 0070 - ಇತರೆ ಆಡಳಿತಾತ್ಮಕ ಸೇವೆಗಳು - 01 - ನ್ಯಾಯಪರಿಪಾಲನೆ 501 - 0 - ಇತರೆ ಸ್ವೀಕೃತಿಗಳು - 06 ಇತರೆ ಬಾಬ್ತುಗಳಿಗೆ (0070-01-501-0-06) ಕ್ಕೆ ಸರ್ಕಾರಿ ಖಜಾನೆಯಲ್ಲಿ ಪಾವತಿಸಿ ಆ ಸಂಬಂಧದ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ನೋಟರಿ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ದ ಕಲಂ 4ರ ಪ್ರಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 1393

## ಆರ್ಥಿಕ ಸಚಿವಾಲಯ

**ವಿಷಯ :** ನಿವೃತ್ತಿ ವೇತನವನ್ನು ಪಡೆಯಲು ಇರುವ ಕನಿಷ್ಠ ಅರ್ಹತಾದಾಯಕ ಸೇವೆಯನ್ನು ಪರಿಷ್ಕರಿಸಿ ನಿಗದಿ ಪಡಿಸುವ ಬಗ್ಗೆ.

**ಓದಲಾಗಿದೆ :** 1) ದಿನಾಂಕ 30.9.2003 ಸಂಖ್ಯೆ: ಎಫ್‌ಡಿ 6 ಸನಿತಿ 2003 ರ ಸರ್ಕಾರಿ ಆದೇಶ.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಬರಪರಿಹಾರ ಕಾರ್ಯಗಳಿಗೆ ಹಣ ಒದಗಿಸುವ ಉದ್ದೇಶದೊಂದಿಗೆ ಆಡಳಿತಾತ್ಮಕ ವೆಚ್ಚಗಳನ್ನು ಕಡಿತಗೊಳಿಸಿ ಸಂಪನ್ಮೂಲ ಕ್ರೋಢೀಕರಿಸುವ ಉದ್ದೇಶದಿಂದ ಸರ್ಕಾರವು ಹಲವಾರು ಮಿತವ್ಯಯ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದು, ಅವುಗಳಲ್ಲಿ ಸರ್ಕಾರಿ ನೌಕರರಿಗೆ ಸಂಬಂಧಿಸಿದ ಸುಧಾರಣೆಗಳಲ್ಲಿ ನಿವೃತ್ತಿ ವೇತನವನ್ನು ಪಡೆಯಲು ಅರ್ಹತಾದಾಯಕ ಕನಿಷ್ಠ ಸೇವೆಯನ್ನು 10 ವರ್ಷಗಳ ಬದಲಾಗಿ 15 ವರ್ಷಗಳಿಗೆ ಪರಿಷ್ಕರಿಸುವುದು ಒಂದಾಗಿತ್ತು. ಈ ಸಂಬಂಧ ಕರ್ನಾಟಕ ನಾಗರೀಕ ಸೇವಾ ನಿಯಮಗಳಿಗೂ ಸಹ ತಿದ್ದುಪಡಿ ತರಲಾಗಿದೆ.

ಈ ಹಿಂದೆ ಜಾರಿಯಲ್ಲಿದ್ದ ನಿಯಮಗಳಂತೆ ನಿವೃತ್ತಿ ವೇತನ ಪಡೆಯಲು ಕನಿಷ್ಠ ಅರ್ಹತಾದಾಯಕ ಸೇವೆಯನ್ನು 10 ವರ್ಷಗಳಿಗೆ ಇಳಿಸಬೇಕೆಂದು ಸರ್ಕಾರಕ್ಕೆ ಹಲವಾರು ಮನವಿಗಳು ಬಂದಿದ್ದು, ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 06 ಸನಿತಿ 2003, ಬೆಂಗಳೂರು, ದಿನಾಂಕ 08ನೇ ಸೆಪ್ಟೆಂಬರ್ 2006**

ವಯೋ ನಿವೃತ್ತಿ ವೇತನವನ್ನು ಪಡೆಯಲು ಕನಿಷ್ಠ ಅರ್ಹತಾದಾಯಕ ಸೇವೆಯನ್ನು 15 ವರ್ಷಗಳಿಗೆ ಹೆಚ್ಚಿಸಿ ನಿಗದಿಗೊಳಿಸಿರುವುದನ್ನು ಪರಿಷ್ಕರಿಸಿ 10 ವರ್ಷಗಳ ಅರ್ಹತಾದಾಯಕ ಸೇವೆ ಎಂದು ನಿಗದಿಗೊಳಿಸಿದೆ.

2) ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ಸಂಬಂಧಪಟ್ಟ ನಿಯಮಗಳಿಗೆ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಗೋಪಾಲಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-1).

ಪಿ.ಆರ್. 1391